

ಶ್ರೀ ರಾಮಕೃಷ್ಣ ಪರಮಹಂಸ ದೇವರು

"ಈಶ್ವರಲಾಭವೇ ಮನುಷ್ಯ ಜೀವನದ ಉದ್ದೇಶ್ಯ"

# ಮುನ್ನುಡಿ

"ಬ್ರಹ್ಮಾನಂದ ವಚನಸುಧ" ಆಧ್ಯಾತ್ಮಿಕ ಸಲಹೆಗಳನ್ನೊಳಗೊಂಡ ಅನುಷ್ಠಾನಯೋಗ್ಯ ಗ್ರಂಥ. ಶ್ರೀ ರಾಮಕೃಷ್ಣ ಪರಮಹಂಸರು ಬ್ರಹ್ಮಾನಂದರನ್ನು ತಮ್ಮ ಮಾನಸಿಕ ಪುತ್ರನೆಂದು ಭಾವಿಸಿದ್ದರು. ಸ್ವಾಮಿ ವಿವೇಕಾನಂದರು ಬ್ರಹ್ಮಾನಂದರನ್ನು "ಆಧ್ಯಾತ್ಮಿಕ ಅನುಭವಗಳ ಮೇರು ಪರ್ವತ"ವೆನ್ನುತ್ತಿದ್ದರು. ಈ ಗ್ರಂಥ ಹಲವು ಜೀವಿಗಳಿಗೆ ಸ್ಫೂರ್ತಿದಾಯಕವಾಗಿದೆ.

ಇದು ಅನೇಕ ಸಾಧಕರ ಪ್ರಿಯಗ್ರಂಥ. ಇದನ್ನು ಹೇಳುವ ಗುರು ಅಪೂರ್ವ ಆಧ್ಯಾತ್ಮಿಕ ಅನುಭವಗಳನ್ನು ಗಳಿಸಿದವರು. ಆಧ್ಯಾತ್ಮಿಕ ಜೀವನ ಮತ್ತು ಸಾಧನೆಯ ಅತಿ ಗಹನ ವಿಷಯವನ್ನು ಶೋಧಿಸಿದವರು. ತಾವು ಜೀವನದಲ್ಲಿ ಪಡೆದ ಭಗವತ್ಸಾಕ್ಷಾತ್ಕಾರವನ್ನು ಇತರರೂ ಪಡೆಯಲಿ ಎಂಬ ಉದ್ದೇಶದಿಂದ ಶಿಷ್ಯರ ಯೋಗ್ಯತೆಗೆ ತಕ್ಕಂತೆ ಅವರೂ ಆ ಅನುಭವದ ಶಿಖರದೆಡೆಗೆ ಏರಿಹೋಗುವುದಕ್ಕೆ ಉಪದೇಶಶ್ರೇಣಿಯನ್ನು ಇಲ್ಲಿ ತೋರಿರುವರು.

ಅನುಮಾನವಿಲ್ಲದ ಅಧಿಕಾರವಾಣಿಯಿಂದ ಇವರು ಹೇಳುವುದರಿಂದಲೇ ಇದು ಇಷ್ಟು ಜನಾದರಣೀಯವಾಗಿರುವುದು. ಪರಮಹಂಸರ ಪರಿಚಯವಾದಮೇಲೆ ಅವರ ಸಾನ್ನಿಧ್ಯದಲ್ಲಿ ಅದ್ಭುತ ಸಾಧನೆಮಾಡಿ ಅಪೂರ್ವ ಅನುಭವ ಗಳಿಸಿರುವುದರಿಂದಲೇ ಅವರ ವಾಣಿಗೆ ಎಲ್ಲರನ್ನೂ ಸೆಳೆವ ಆಕರ್ಷಣೆ ಇದೆ. ಅದು ಸಾಧಕರ ಸಂದೇಹವನ್ನು ಪರಿಹರಿಸಬಲ್ಲುದು. ಹೊಸ ಭರವಸೆಯನ್ನು ನೀಡಬಲ್ಲುದು.

ಇಲ್ಲಿ ಹೇಳಿರುವ ಸಲಹೆಗಳೆಲ್ಲಾ ಆಗಲೇ ಸೇವಾಕ್ಷೇತ್ರಗಳಲ್ಲಿ ದುಡಿಯುತ್ತಿದ್ದವರಿಗೆ. ಅಂತಹವರಿಗೆ ಹೆಚ್ಚಿಗೆ ಕರ್ಮದ ಆವಶ್ಯಕತೆ ಇರಲಿಲ್ಲ. ಆಧ್ಯಾತ್ಮಿಕ ಸಾಧನೆಯ ಆವಶ್ಯಕವನ್ನು ಅವರಿಗೆ ಒತ್ತಿಹೇಳುತ್ತಿದ್ದರು. ಇವರಿಂದ ತಾವು ಸ್ವೀಕರಿಸಿರುವ ಸೇವಾಕಾರ್ಯಕ್ಕೂ ಅನುಕೂಲವಾಗುವುದೆಂಬುದನ್ನು ಗಮನಕ್ಕೆ ತರುವರು

ಶ್ರೀ ರಾಮಕೃಷ್ಣಸಂಘದ ಸನ್ಯಾಸವರ್ಗಕ್ಕೆ ಸೇರಿದ ಅಷ್ಟಶಿಷ್ಯರಿಗೆ

ಕೊಟ್ಟ ಬೋಧನೆಗಳೆಲ್ಲವೂ ಇಲ್ಲಿ ಇಲ್ಲ. ಕೇವಲ ಕೆಲವು ವ್ಯಕ್ತಿಗಳನ್ನು ಕುರಿತು ಹೇಳಿದುದಾಗಲಿ, ಅತಿ ಮುಂದುವರಿದ ಸಾಧಕರಿಗೆ ಮಾತ್ರ ಸಹಾಯವಾಗುವಂತಹ ಸಂಗತಿಗಳನ್ನಾಗಲೀ ಇಲ್ಲಿ ವಿವರಿಸಿಲ್ಲ. ಸಾಧಾರಣ ಸಾಧಕರಿಗೆ ಮಾತ್ರ ಅನ್ವಯಿಸುವ ಸಲಹೆಗಳನ್ನು ಇಲ್ಲಿ ನಿರೂಪಿಸಿರುವೆವು. ಇನ್ನೂ ಕೂಡ ಪುಸ್ತಕದಾಗಿನಲ್ಲಿ ಬರಲಿ ಎಂದು ಕೊಟ್ಟಿದ್ದಲ್ಲಿ ಆದರೆ ಈ ಹಿತಸುಖಿಯ ಪ್ರಯೋಜನದಲ್ಲಿ ಎಲ್ಲರೂ ಭಾಗಿಗಳಾಗಲಿ ಎಂಬ ಅಭಿಲಾಷೆಯೇ ಗ್ರಂಥಪ್ರಕಾಶಕ್ಕೆ ಕಾರಣ

ಆಧ್ಯಾತ್ಮಿಕ ಜಿಜ್ಞಾಸುಗಳು ತಮ್ಮ ಅವಶ್ಯಕತೆಗೆ ತೋರಿದಷ್ಟನ್ನು ಇದರಿಂದ ಗ್ರಹಿಸಬಹುದು. ಸಾಧಕರಿಗೆ ಈ ಗ್ರಂಥ ಮಾರ್ಗದರ್ಶಕವಾಗಲಿ, ಸ್ಫೂರ್ತಿದಾಯಕವಾಗಬೇಕೆಂಬುದೇ ನಮ್ಮ ಹಾರೈಕೆ.

ಯತೀಶ್ವರಾನಂದ.

# ಪರಿಚಯ

ಒಮ್ಮೆ ಶ್ರೀರಾಮಕೃಷ್ಣ ಪರಮಹಂಸರು ಧ್ಯಾನಮಗ್ನರಾಗಿದ್ದಾಗ ಅವರಿಗೊಂದು ದೃಶ್ಯ ಕಂಡಿತು. ಜಗನ್ಮಾತೆ ಸುಂದರ ಮನೋಹರ ರೂಪಿನ ಒಬ್ಬ ಹುಡುಗನನ್ನು ಇವರ ತೊಡೆಯಮೇಲೆ ಇಟ್ಟು, "ಇದು ನಿನ್ನ ಮಗು" ಎಂದಂತೆ ತೋರಿತು. ಕೆಲವು ದಿನಗಳಾದಮೇಲೆ ಇವರ ಬಳಿಗೆ ಒಬ್ಬ ಹುಡುಗ ಬಂದನು. ಈ ಹುಡುಗನನ್ನೇ ಇವರು ಹಿಂದೆ ದೃಶ್ಯದಲ್ಲಿ ಕಂಡಿದ್ದು. ಇವರೇ ಪರಮಹಂಸರ ಮಾನಸಿಕ ಪುತ್ರರು. ನಂತರ ಸ್ವಾಮಿ ಬ್ರಹ್ಮಾನಂದರಂತೆ ಶ್ರೀರಾಮಕೃಷ್ಣಸಂಘದಲ್ಲಿ ಪ್ರಖ್ಯಾತರಾದರು.

ಕಲ್ಕತ್ತೆಗೆ ಸಮೀಪದಲ್ಲಿರುವ ಗ್ರಾಮದಲ್ಲಿ ಆನಂದ ಮೋಹನ್ ಘೋಶ್ ಎಂಬ ಭದ್ರಮನುಷ್ಯನಿಗೆ ೧೮೬೩ ರಲ್ಲಿ ಜನಿಸಿದ ಮೊದಲನೆ ಮಗುವೆ ರಾಖಾಲ್. ಇವರೇ ನಂತರ ಸ್ವಾಮಿ ಬ್ರಹ್ಮಾನಂದರಾದರು. ಬಾಲ್ಯದಲ್ಲೇ ಇವರ ತಾಯಿ ಸ್ವರ್ಗಸ್ಥರಾದರು. ತಂದೆ ಮಗನ ವಿದ್ಯಾಭ್ಯಾಸಕ್ಕೆ ಎಲ್ಲಾ ಸೌಕರ್ಯವನ್ನೂ ಮಾಡಿದ್ದರು. ರಾಖಾಲ್ ಹುಡುಗರಾಗಿದ್ದಾಗ ಆಕರ್ಷಣೀಯ ವ್ಯಕ್ತಿಯಾಗಿದ್ದರು. ನೋಡಲು ಸುಂದರವಾಗಿದ್ದರು, ದೃಢಕಾಯ ದೇಹ, ಎಲ್ಲರನ್ನೂ ಮುಗ್ಧಗೊಳಿಸುವಂತಹ ಶೀಲಸಂಪನ್ನರು, ಜತೆಗೆ ಆಟಪಾಟಗಳಲ್ಲಿಯೂ ಮುಂದಿದ್ದರು.

ರಾಖಾಲಿಗೆ ಬಾಲ್ಯವಯಸ್ಸಿನಲ್ಲಿಯೇ ಮದುವೆಯಾಯಿತು. ಪರಮಹಂಸರ ಒಬ್ಬ ಗೃಹಸ್ಥ ಭಕ್ತರ ಮಗಳನ್ನೇ ಇವರಿಗೆ ಕೊಟ್ಟಿದ್ದರು. ೧೮೮೧ ರಲ್ಲಿ ಒಂದು ದಿನ ಇವರು ಹೆಂಡತಿಯ ಬಂಧುಗಳ ಜತೆಯಲ್ಲಿ ದಕ್ಷಿಣೇಶ್ವರಕ್ಕೆ ಬಂದಾಗ ಶ್ರೀರಾಮಕೃಷ್ಣರ ಪ್ರಥಮ ಪರಿಚಯವಾಯಿತು. ಅಂದಿನಿಂದ ಪರಮಹಂಸರಿಗೂ ಇವರಿಗೂ ಸಂಬಂಧ ಅತಿ ನಿಕಟವಾಯಿತು. ತಾಯಿ ಹೇಗೆ ತನ್ನ ಮಗುವಿಗಾಗಿ ಎಷ್ಟು ಕಷ್ಟವನ್ನಾದರೂ ಸಹಿಸಿ, ನಿದ್ದೆಕೆಟ್ಟು ಹಗಲು ರಾತ್ರಿ ದುಡಿಯುವಳೋ ಹಾಗೆಯೆ ಶ್ರೀರಾಮಕೃಷ್ಣರು ರಾಖಾಲರನ್ನು ಬೆಳೆಸಿ, ಆಶೀರ್ವದಿಸಿ, ಆಧ್ಯಾತ್ಮಿಕ ಅನುಭವಗಳನ್ನು ಇತರರಿಗೆ ಕೊಡಲು ಯೋಗ್ಯವ್ಯಕ್ತಿಯನ್ನಾಗಿ ಮಾಡಿದರು.

೧೮೮೬ ರಲ್ಲಿ ಪರಮಹಂಸರ ಮಹಾಸಮಾಧಿಯ ನಂತರ ಸ್ವಾಮಿ

ವಿವೇಕಾನಂದರ ನೇತೃತ್ವದಲ್ಲಿ, ತರುಣ ಶಿಷ್ಯರ ತಂಡ ಕಲೆತು, ಮನೆ ತೊರೆದು ಮಠ ಸೇರಿದರು. ಪರಮಹಂಸರ ಕೃಪಾಕಟಾಕ್ಷದಿಂದ ತಾತ್ಕಾಲಿಕವಾಗಿ ದೊರೆತ ಅನುಭವಗಳನ್ನು, ತಮ್ಮ ಜೀವನದ ನಿತ್ಯ ಅನುಭವವನ್ನಾಗಿ ಮಾಡಿಕೊಳ್ಳಲು ಉಗ್ರ ಸಾಧನೆಯಲ್ಲೂ ನಿರತರಾದರು. ಕೆಲವು ಕಾಲ ತೀರ್ಥಯಾತ್ರೆ ಮಾಡಿ ಪುನಃ ಮಠದಲ್ಲಿ ಗಾಢಸಾಧನೆಯಲ್ಲಿ ತನ್ಮಯರಾದರು.

ಸ್ವಾಮಿ ವಿವೇಕಾನಂದರು ೧೮೯೩ ರಲ್ಲಿ ಚಿಕಾಗೊ ನಗರದಲ್ಲಿ ನೆರೆದ ವಿಶ್ವಧರ್ಮಸಮ್ಮೇಳನದಲ್ಲಿ ಉಪನ್ಯಾಸ ಮಾಡಿ ಪ್ರಖ್ಯಾತರಾದರು. ಆಗ ಅಮೆರಿಕಾದೇಶದಿಂದ ತಮ್ಮ ಗುರುಭಾಯಿಗಳಿಗೆ "ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯಚ" ಎಂಬ ಆದರ್ಶಕ್ಕೆ ತಕ್ಕಂತೆ ಧ್ಯಾನದ ಜತೆಗೆ ಸೇವಾ ಕಾರ್ಯವನ್ನು ಸಂಘದ ಮೂಲಕ ಮಾಡುವಂತೆ ಹುರಿದುಂಬಿಸುತ್ತಿದ್ದರು. ಭರತಖಂಡಕ್ಕೆ ಹಿಂತಿರುಗಿ ಬಂದಮೇಲೆ ಶ್ರೀರಾಮಕೃಷ್ಣ ಮಹಾಸಂಘವನ್ನು ಸ್ಥಾಪಿಸಿ ಕಲ್ಕತ್ತೆಯ ಕೇಂದ್ರಕ್ಕೆ ಸ್ವಾಮಿ ಬ್ರಹ್ಮಾನಂದರನ್ನು ಅಧ್ಯಕ್ಷರನ್ನಾಗಿ ಮಾಡಿದರು. ೧೯೦೨ ರಲ್ಲಿ ಸ್ವಾಮಿ ವಿವೇಕಾನಂದರು ಕಾಲವಾದಮೇಲೆ, ಸ್ವಾಮಿ ಬ್ರಹ್ಮಾನಂದರೇ ಇಡೀ ಸಂಘದ ಗುರುತರದ ಜವಾಬ್ದಾರಿಯನ್ನು ೧೯೨೨ ರಲ್ಲಿ ತಮ್ಮ ಮಹಾಸಮಾಧಿಯವರೆಗೆ ವಹಿಸಬೇಕಾಯಿತು.

ಸ್ವಾಮಿ ವಿವೇಕಾನಂದರು, ಬ್ರಹ್ಮಾನಂದರು ಒಂದೇ ಗುರುಪದತಲದಲ್ಲಿ ಬೆಳೆದ ಶಿಷ್ಯರು. ವಿವೇಕಾನಂದರು ಘನಘರ್ಜನೆಯಿಂದ ಆರ್ಭಟಿಸಿ ಮಳೆಕರೆವ ಮುಂಗಾರುಮುಗಿಲಿನಂತೆ. ಬ್ರಹ್ಮಾನಂದರು ಯಾರಿಗೂ ಗೋಚರವಾಗದೆ ಮೌನವಾಗಿ ಬೀಳುವ ತುಂತುರು ಮಳೆಯಂತೆ. ಸ್ವಾಮಿ ವಿವೇಕಾನಂದರಂತೆ, ಬ್ರಹ್ಮಾನಂದರು ವಾಗ್ಮಿಗಳಲ್ಲ, ಕರ್ಮಪಟುಗಳಂತೆ ಕಾಣುತ್ತಿರಲಿಲ್ಲ, ಸುಂಟರಗಾಳಿಯಂತೆ ಸಂಚರಿಸಲಿಲ್ಲ. ಆದರೆ ಆಧ್ಯಾತ್ಮಿಕ ಜೀವನದಲ್ಲಿ ಇವರಿಗೆ ಇದ್ದ ಅನುಭವ, ಸ್ವಾಮಿ ವಿವೇಕಾನಂದರಿಗಿಂತ ಕಡಿಮೆಯದಲ್ಲ. ಸೇವಾಕಾರ್ಯ ಮಾಡಬೇಕಾದರೆ ಆಧ್ಯಾತ್ಮಿಕ ತಳಹದಿ ಅತ್ಯಂತ ಅವಶ್ಯಕವೆಂದು ಒತ್ತಿ ಹೇಳುತ್ತಿದ್ದರು. ಸೇವೆ ಯಶಸ್ವಿಯಾಗಬೇಕಾದರೆ, ಸೇವೆಯ ಹಿಂದೆ ಧ್ಯಾನಮಯ ಜೀವನದ ಹಿನ್ನೆಲೆ ಇರಬೇಕು.

ನಾವು ಮಾಡುವ ಕೆಲಸ ಭಗವಂತನದು. ಅದರಿಂದ ಬರುವ ಫಲಕ್ಕೆ ಆಸಕ್ತನಾಗಕೂಡದು. ಇದೇ ಕರ್ಮರಹಸ್ಯವೆಂದು ಅನೇಕ ವೇಳೆ ಒತ್ತಿ ಹೇಳುತ್ತಿದ್ದರು. ಚಾರಿತ್ರಶುದ್ಧಿ ಇಲ್ಲದೆ ಯಾವ ಮಹಾಕಾರ್ಯವನ್ನೂ ಸಾಧಿಸಲಾರೆವು. ತನ್ನ ಜೀವನದ ಸಮಸ್ಯೆಯನ್ನೇ ಬಗೆಹರಿಸದವನು ಮತ್ತೊಬ್ಬರ ಅಥವಾ ದೇಶದ ಸಮಸ್ಯೆಯನ್ನು ಹೇಗೆ ಬಗೆಹರಿಸಬಲ್ಲನು ಎನ್ನುತ್ತಿದ್ದರು.

ಸ್ವಾಮಿ ಬ್ರಹ್ಮಾನಂದರದು ಸರ್ವತೋಮುಖವಾದ ಜೀವನ, ಅನಂತ ಮುಖವಾದ ರೀತಿ. ಧ್ಯಾನ, ಕರ್ಮ, ಭಕ್ತಿಯಲ್ಲಿ ನಿಷ್ಣಾತರು, ವ್ಯಾವಹಾರಿಕ ಜಗತ್ತಿನ ನಡವಳಿಕೆಯಲ್ಲಿಯೂ ಚತುರರು. ದೂರದರ್ಶಿಗಳು, ಮಿತಭಾಷಿಗಳು, ಮಗುವಿನಂತೆ ಸರಳ, ಪರಮಹಂಸರಂತೆಯೇ ಹಾಸ್ಯಪ್ರಿಯರು, ರಸಿಕರು, ಒಮ್ಮೆ ನಕ್ಕು ನಗಿಸುವರು. ಮರುಕ್ಷಣದಲ್ಲಿಯೇ ಸಮಾಧಿಯ ಮೌನದಲ್ಲಿ ತಲ್ಲೀನರಾಗಬಲ್ಲವರಾಗಿದ್ದರು. ಸಂಗೀತ, ತೋಟ, ಅಂಗಸಾಧನೆ, ಅಧ್ಯಯನ ಇವುಗಳ ಕಡೆಗೂ ಅಷ್ಟೇ ಗಮನ ಕೊಡುತ್ತಿದ್ದರು.

ಶ್ರೀರಾಮಕೃಷ್ಣ ಪರಮಹಂಸರು ಕಠೋರಸಾಧನೆಯಿಂದ ಗಳಿಸಿದ ಸಾಕ್ಷಾತ್ಕಾರ ಅಮೃತ ಹಲವು ನಾಲೆಗಳ ಮೂಲಕ ಭವಜೀವಿಗಳ ಉದ್ಧಾರಕ್ಕೆ ಹರಿದುಬಂದಿದೆ. ಅದರಲ್ಲಿ ಪರಮಹಂಸರ ಮಾನಸಿಕ ಪುತ್ರರಂತೆ ಇದ್ದ ಬ್ರಹ್ಮಾನಂದರು ಒಂದು ಅತಿ ಮುಖ್ಯ ನಾಲೆ. ಎಷ್ಟೋ ಭವಜೀವಿಗಳು ಇವರ ಸಂಪರ್ಕದಿಂದ ಉದ್ಧಾರವಾಗಿವೆ.

ಅವರು ಯಾವ ಗ್ರಂಥವನ್ನೂ ಬರೆಯಲಿಲ್ಲ. ಬರೆಯುವುದು, ಉಪನ್ಯಾಸ ಮಾಡುವುದು ಇವರ ಪ್ರಕೃತಿಗೆ ವಿರೋಧ. ವೇದವೇದಾಂತಗಳ ಸಂದೇಶದ ಸಾರ ಇವರ ಬಾಳಉಸಿರಾಗಿತ್ತು. ಯಾರಾದರೂ ಆಧ್ಯಾತ್ಮಿಕ ಪಿಪಾಸುಗಳು ಇವರ ಹತ್ತಿರ ಬಂದು ತಮ್ಮ ಸಮಸ್ಯೆಗಳನ್ನು ಇವರೊಂದಿಗೆ ಇಟ್ಟರೆ ಸಮರ್ಪಕವಾದ ಉತ್ತರವನ್ನು ಕೊಡುತ್ತಿದ್ದರು. ಅವರು ಆಧ್ಯಾತ್ಮಿಕ ವಿಷಯಗಳನ್ನು ಎಲ್ಲರೊಂದಿಗೂ ಪ್ರಸ್ತಾಪಿಸುತ್ತಿರಲಿಲ್ಲ. ಯಾರು ನಿಜವಾಗಿಯೂ ತಾವು ಹೇಳುವುದನ್ನು ಅನುಷ್ಠಾನಕ್ಕೆ ತರುವಂತೆ ಇವರಿಗೆ ತೋರುತ್ತಿತ್ತೋ ಅವರ ಮೇಲ್ಮೆಗೆ ಎಷ್ಟು ತೊಂದರೆಯನ್ನು

ಬೇಕಾದರೂ ತೆಗೆದುಕೊಳ್ಳುತ್ತಿದ್ದರು. ಹಾಗೆ ಕೆಲವು ಶಿಷ್ಯರು ಕೇಳಿದ ಪ್ರಶ್ನೆಗೆ ಕೊಟ್ಟ ಉತ್ತರ ಈ ಗ್ರಂಥದಲ್ಲಿದೆ. ಮೊದಲು ಈ ಗ್ರಂಥ ಆಂಗ್ಲ ಭಾಷೆಯಲ್ಲಿ ಪ್ರಕಟವಾಯಿತು. ಇದನ್ನು ಈಗ ಕನ್ನಡದಲ್ಲಿ ಪ್ರಕಟಿಸಿರುವೆವು. ಆಧ್ಯಾತ್ಮಿಕ ಜೀವನದಲ್ಲಿ ನಡೆಯಬೇಕೆಂದು ಬಯಸುವವರಿಗೆ ಈ ಗ್ರಂಥ ಒಂದು ಪಠ್ಯಪುಸ್ತಕದಂತೆ ಇದೆ. ಸಾಧಕರ ಜೀವನದಲ್ಲಿ ಬರುವ ಹಲವಾರು ಸಂಶಯ, ಆತಂಕಗಳು, ಅದನ್ನು ಹೇಗೆ ಎದುರಿಸಿ ಪಾರಾಗಬೇಕೆಂಬುದನ್ನು ಇಲ್ಲಿ ವಿವರಿಸುವರು. ಕೇವಲ ಪಾಂಡಿತ್ಯದ ದೃಷ್ಟಿಯಿಂದ ಇದನ್ನು ಬರೆದುದಲ್ಲ. ಇದರಲ್ಲಿ ಇರುವುದೆಲ್ಲ ಅನುಭವದ ಮಾತು. ಆತ್ಮಸಾಕ್ಷಾತ್ಕಾರವನ್ನು ಪಡೆದ ಪೂಜ್ಯತಮ ವ್ಯಕ್ತಿಯ ಹೃದಯಾಂತರಾಳದಿಂದ ಜಿನುಗಿಬಂದ ವಚನಸುಧೆ ಇದು.

**ಪ್ರಕಾಶಕರು.**



# ವಿಷಯಾನುಕ್ರಮಣಿಕೆ

———

# ಬ್ರಹ್ಮಾನಂದ ವಚನಸುಧೆ

## ೧

### ಧ್ಯಾನ ಮತ್ತು ಸಾಕ್ಷಾತ್ಕಾರ

ಪ್ರಶ್ನೆ: ಸ್ವಾಮಿಜಿ, ನಾನು ಜಪ ಧ್ಯಾನಮಾಡುತ್ತಿರುವೆ. ಅದರಲ್ಲಿ ನನಗೆ ಇನ್ನೂ ಅಭಿರುಚಿ ಹುಟ್ಟಿಲ್ಲ. ಹೇಗೋ ಹೋರಾಡುತ್ತಿರುವೆ. ನಾನೇನು ಮಾಡಲಿ?

ಸ್ವಾಮಿಜಿ: ಪ್ರಾರಂಭದಲ್ಲಿ ಅಭಿರುಚಿ ಹುಟ್ಟಲು ಸಾಧ್ಯವೆ? ಇಲ್ಲ. ಅದನ್ನು ಪಡೆಯುವುದಕ್ಕೆ ನಿನ್ನ ಶಕ್ತಿಯನ್ನೆಲ್ಲ ಒಟ್ಟುಗೂಡಿಸು. ಉಳಿದ ವಿಷಯಗಳಿಗೆ ಸ್ವಲ್ಪವೂ ಗಮನ ಕೊಡಬೇಡ. ಅದಕ್ಕಾಗಿ ಮಾತ್ರ ಹೃತ್ಪೂರ್ವಕ ಹೋರಾಡು. ಮುಂದೆ, ಮುಂದೆ! ನಿನ್ನ ಈಗಿನ ಮಾನಸಿಕ ಸ್ಥಿತಿಯಲ್ಲಿ ಎಂದಿಗೂ ತೃಪ್ತನಾಗಬೇಡ. ನಿನ್ನಲ್ಲಿ ದಾವಾನಲದಂತಹ ಅತೃಪ್ತಿಯನ್ನು ಉಂಟುಮಾಡಿಕೊ. "ನಾನೆಷ್ಟು ಮುಂದುವರಿಯುತ್ತಿರುವೆ? ಏನೂ ಇಲ್ಲ" ಎಂದು ನಿನಗೆ ನೀನೇ ಹೇಳಿಕೊ. ಶ್ರೀರಾಮಕೃಷ್ಣರು ಜಗನ್ಮಾತೆಗೆ "ಹೇ ಜಗನ್ಮಾತೆ, ಮತ್ತೊಂದು ದಿನ ಕಳೆಯಿತು. ನಾನು ನಿನ್ನನ್ನು ಇನ್ನೂ ನೋಡಲಿಲ್ಲ!" ಎಂದು ಹೇಳುತ್ತಿದ್ದರು.

ಪ್ರತಿದಿನ ರಾತ್ರಿ ನೀವು ನಿದ್ದೆಮಾಡುವುದಕ್ಕೆ ಮುಂಚೆ, ಒಳ್ಳೆಯ ಕೆಲಸವನ್ನು ಮಾಡುವುದಕ್ಕೆ ಎಷ್ಟು ಕಾಲವನ್ನು ಉಪಯೋಗಿಸಿದೆ, ವ್ಯರ್ಥ ಕೆಲಸಕ್ಕೆ ಎಷ್ಟನ್ನು ಉಪಯೋಗಿಸಿದೆ, ಎಷ್ಟು ಹೊತ್ತು ಧ್ಯಾನಮಾಡಿದೆ, ಎಂದು ಸ್ವಲ್ಪ ಹೊತ್ತು ಆಲೋಚಿಸಿ ನೋಡಿ. ಮನಸ್ಸನ್ನು ತಪಸ್ಸು ಮತ್ತು ಬ್ರಹ್ಮಚರ್ಯದಿಂದ ಸದೃಢವಾಗಿ ಮಾಡಿ.

ಶ್ರೀಮಂತರ ಮನೆ ಬಾಗಿಲಿನಲ್ಲಿ ಒಬ್ಬ ಕಾವಲುಗಾರನನ್ನು ಇಡುವರು. ಅವನ ಕೆಲಸ, ಕಳ್ಳರು, ದನ, ಕುರಿ ಮುಂತಾದುವು ಮನೆ ಒಳಗೆ ಹೋಗದಂತೆ ನೋಡಿಕೊಳ್ಳುವುದು. ಮನಸ್ಸು ಮನುಷ್ಯನ ಕಾವಲುಗಾರ. ಮನಸ್ಸು ದೃಢವಾದಷ್ಟು ಒಳ್ಳೆಯದು. ಮನಸ್ಸನ್ನು ಒಂದು ತುಂಟ ಕುದುರೆಗೂ ಹೋಲಿಸುವರು. ಅಂತಹ ಕುದುರೆ ಸವಾರನನ್ನು ತಪ್ಪು ದಾರಿಗೆ ಒಯ್ಯುವುದು. ಯಾರು ಲಗಾಮನ್ನು ಬಿಗಿಹಿಡಿದು ಕುದುರೆಯನ್ನು ನಿಗ್ರಹಿಸುವರೊ ಅವರು ಮಾತ್ರ ಸರಿಯಾದ ದಾರಿಯಲ್ಲಿ ಹೋಗುವರು. ಹೋರಾಡು! ಹೋರಾಡು! ನೀನು ಏನು ಮಾಡುತ್ತಿರುವಿ? ಕೇವಲ ಕಾವಿಬಟ್ಟೆ ಹಾಕಿಕೊಂಡು, ಮನೆ, ನೆಂಟರು, ಇಷ್ಟರು ಇವರನ್ನು ಬಿಟ್ಟ

ಮಾತ್ರಕ್ಕೆ ಎಲ್ಲಾ ಸಿಕ್ಕುವುದೆ? ನಿನಗೆ ಏನು ಸಾಕ್ಷಾತ್ಕಾರವಾಗಿದೆ? ಕಾಲ ಓಡುತ್ತಿದೆ. ಒಂದು ಕ್ಷಣವನ್ನೂ ವ್ಯರ್ಥಮಾಡಬೇಡ. ಹೆಚ್ಚು ಎಂದರೆ ಇನ್ನು ಮೂರು ನಾಲ್ಕು ವರುಷ ನೀನು ಕಷ್ಟಪಟ್ಟು ಕೆಲಸಮಾಡ ಬಹುದು. ಅನಂತರ ದೇಹ ಮತ್ತು ಮನಸ್ಸು ಎರಡೂ ದುರ್ಬಲವಾಗುವುದು. ಏನನ್ನು ಮಾಡಲೂ ಆಗುವುದಿಲ್ಲ. ಸತತ ಪ್ರಯತ್ನವಿಲ್ಲದೆ ಏನನ್ನು ಸಾಧಿಸಬಲ್ಲೆವು?

"ಮೊದಲು ಆಸಕ್ತಿ, ಶ್ರದ್ಧೆ, ಭಕ್ತಿ ಬರಲಿ. ನಂತರ ಸಾಧನೆ ಮಾಡು ವೆವು" ಎಂದು ನೀನು ಆಲೋಚಿಸಬಹುದು. ಇದು ಸಾಧ್ಯವೆ? ಮುಂಜಾನೆಗೆ ಮುಂಚೆ ಹಗಲು ಬರುವುದೆ? ಭಗವಂತ ಬಂದರೆ ಅವನ ಅನುಯಾಯಿ ಗಳಂತೆ ಪ್ರೀತಿ, ಭಕ್ತಿ, ಶ್ರದ್ಧೆ ಎಲ್ಲಾ ಬರುವುವು.

ತಪಸ್ಸಿಲ್ಲದೆ ಏನನ್ನಾದರೂ ಸಾಧಿಸಲು ಸಾಧ್ಯವೆ? ಬ್ರಹ್ಮ ಆದಿಯಲ್ಲಿ "ತಪಸ್, ತಪಸ್, ತಪಸ್" ಎಂಬ ಶಬ್ದವನ್ನು ಕೇಳಿದನು. ಅವತಾರ ವ್ಯಕ್ತಿಗಳು ಕೂಡ ಎಂತಹ ಉಗ್ರತಪಸ್ಸನ್ನು ಮಾಡಿದರು ಕಾಣುವುದಿಲ್ಲವೆ? ಶ್ರಮವಿಲ್ಲದೆ ಏನನ್ನಾದರೂ ಯಾರಾದರೂ ಗಳಿಸಿರುವರೆ? ಬುದ್ಧ, ಶಂಕರ ಮುಂತಾದವರು ಎಷ್ಟು ಅದ್ಭುತ ತಪಸ್ಸನ್ನು ಮಾಡಿದರು. ಎಂತಹ ತೀವ್ರ ತ್ಯಾಗ ಅವರಲ್ಲಿತ್ತು! ಎಷ್ಟು ಕಠಿಣಸಾಧನೆ ಅವರು ಮಾಡಿದರು?

ಮೊದಲು ಶ್ರದ್ಧೆ ಬರುವುದಿಲ್ಲ. ಮೊದಲು ಸಾಕ್ಷಾತ್ಕಾರ, ನಂತರ ಶ್ರದ್ಧೆ. ಮೊದಲು ಸಾಧಕ, ತನ್ನ ಗುರುವಿನ ಅಥವಾ ಮಹಾತ್ಮರ ಉಪದೇಶವನ್ನು ನಂಬಬೇಕು. ಆಗ ಮಾತ್ರ ಅವನು ಗುರಿ ಎಡೆಗೆ ಮುಂದುವರಿಯಬಹುದು.

ಶ್ರೀರಾಮಕೃಷ್ಣರು ಹೇಳಿದ ಮುತ್ತಿನಚಿಪ್ಪಿನ ಕಥೆ ಗೊತ್ತಿದೆಯೆ? ಮುತ್ತಿನಚಿಪ್ಪು ತನ್ನ ಚಿಪ್ಪನ್ನು ತೆರೆದು ಮೇಲಿನಿಂದ ಬೀಳುವ ಒಂದು ಹನಿ ಸ್ವಾತೀಮಳೆಗೆ ಕಾಯುತ್ತಿರುವುದು. ಒಂದು ಹನಿ ಬಿದ್ದೊಡನೆಯೆ ಚಿಪ್ಪನ್ನು ಮುಚ್ಚಿ ಅದು ಸಮುದ್ರದ ತಳಕ್ಕೆ ಹೋಗಿ ಸುಂದರವಾದ ಮುತ್ತನ್ನು ಮಾಡುವುದು. ಅದರಂತೆ ನೀವು ಶ್ರಮಪಡಬೇಕು. ಧ್ಯಾನಸಾಗರದಲ್ಲಿ ಮುಳಗಬೇಕು.

ನಿಮ್ಮ ಕಾಲಮೇಲೆ ನೀವು ಇನ್ನೂ ನಿಲ್ಲಲಾರಿರಿ. ಆಧ್ಯಾತ್ಮಿಕ ಜೀವನದಲ್ಲಿ ಸ್ವಪ್ರಯತ್ನ ಅತ್ಯಾವಶ್ಯಕ. ನಾಲ್ಕು ವರ್ಷವಾದರೂ ಏನಾದರೂ ಸಾಧನೆಮಾಡು. ಆಗ ನೀನು ಸ್ವಲ್ಪವೂ ಮುಂದುವರಿಯದೆ ಇದ್ದರೆ ನನ್ನನ್ನು ದೂರು.

ರಜಸ್ಸು ಮತ್ತು ತಮೋಗುಣದಿಂದ ಪಾರಾಗುವವರೆಗೂ ಜಪ

ಮತ್ತು ಧ್ಯಾನ ಸಾಧ್ಯವಿಲ್ಲ. ಅನಂತರ ಸತ್ತ್ವದ ಆಚೆಗೂ ಹೋಗಿ ಆಧ್ಯಾತ್ಮಿಕ ಗುರಿಯನ್ನು ಮುಟ್ಟಬೇಕು. ಅಲ್ಲಿಂದ ಮಾತ್ರ ಹಿಂತಿರುಗುವುದಿಲ್ಲ.

ಮಾನವ ಜನ್ಮವನ್ನು ಪಡೆಯುವುದು ಎಷ್ಟು ದುರ್ಲಭ! ಆದರೂ ಈ ಮಾನವ ಜನ್ಮದಲ್ಲಿ ಮಾತ್ರ ಭಗವಂತನನ್ನು ಪಡೆಯಲು ಸಾಧ್ಯ. ಈ ಜನ್ಮದಲ್ಲಿ ಕಷ್ಟಪಟ್ಟು ಸಾಧನೆಮಾಡಿ ಯಾವ ಗುರಿಯನ್ನು ಸೇರಿದರೆ ಹಿಂತಿರುಗಿ ಬರಲಾರೆವೊ ಅದನ್ನು ಮುಟ್ಟಿ.

ಮನಸ್ಸನ್ನು ಮೆಟ್ಟಲು ಮೆಟ್ಟಲಾಗಿ ಮೇಲೆತ್ತಬೇಕು. ಸ್ಥೂಲದಿಂದ ಸೂಕ್ಷ್ಮ, ಸೂಕ್ಷ್ಮದಿಂದ ಕಾರಣ, ಅಲ್ಲಿಂದ ಮಹಾಕಾರಣ, ಕೊನೆಗೆ ಸಮಾಧಿ. ಭಗವಂತನಲ್ಲಿ ಸಂಪೂರ್ಣ ಶರಣಾಗತರಾಗಬೇಕು. ಅವನೇ ಸರ್ವಸ್ವ. ಅವನಿಲ್ಲದೇ ಬೇರೇನೂ ಇಲ್ಲ. "ಸರ್ವಂ ಖಲ್ವಿದಂ ಬ್ರಹ್ಮ" ಎಲ್ಲವೂ ಬ್ರಹ್ಮಮಯ. ಎಲ್ಲಾ ಅವನದೆ. ಯಾವಾಗಲೂ ಲೆಕ್ಕಾಚಾರ ಮಾಡುತ್ತಿರಬೇಡ. ಆತ್ಮಾರ್ಪಣೆ ಒಂದು ದಿನದಲ್ಲಿ ಸಾಧ್ಯವೆ? ಅದು ಸಿದ್ಧಿಸಿದರೆ ಎಲ್ಲಾ ಸಿದ್ಧಿಸಿದಂತೆ, ಅದನ್ನು ಪಡೆಯಲು ಬಹುಶ್ರಮಪಡ ಬೇಕು.

ಜೀವನ ಅನಂತ. ಮನುಷ್ಯನ ಆಯುಸ್ಸಾದರೋ, ಹೆಚ್ಚು ಎಂದರೆ ನೂರು ವರ್ಷ. ಅನಂತ ಜೀವನ, ಅದರೊಂದಿಗೆ ಅನಂತ ಆನಂದವನ್ನು ಅನುಭವಿಸಬೇಕೆಂಬ ಇಚ್ಛೆ ಇದ್ದರೆ ಈ ನೂರು ವರ್ಷದ ಸುಖಸಂತೋಷ ವನ್ನು ತ್ಯಜಿಸು.

೨

## ಸಾಧನೆ

ಸ್ವಾಮಿಜಿ: ನಿನ್ನ ಸಾಧನೆ ಸರಿಯಾಗಿ ಸಾಗುತ್ತಿದೆಯೆ?

ಶಿಷ್ಯ: ಇಲ್ಲ ಸ್ವಾಮಿಜಿ. ನಾನು ಎಷ್ಟು ಪ್ರಯತ್ನಪಟ್ಟರೂ ಮುಂದುವರಿಯುವಂತೆ ಕಾಣೆ. ಅದಕ್ಕೆ ಶಾಂತಿಯೂ ಇಲ್ಲ. ನಾವು ಹುಟ್ಟುವಾಗಲೇ ಹೀನ ಸಂಸ್ಕಾರಗಳ ಜೊತೆಗೆ ಬಂದಿರುವೆವು. ಇವೇ ನಮ್ಮ ಸಾಧನೆಗೆ ಆತಂಕವಾಗಿ ನಿಲ್ಲುವುವು.

ಸ್ವಾಮಿಜಿ: ಮಗು! ನೀನು ಹಾಗೆ ಯೋಚಿಸಬಾರದು. ಅರ್ಧ ರಾತ್ರಿಯ ಸಮಯದಲ್ಲಿ ಜಪ ಮಾಡು. ಅದು ಸಾಧ್ಯವಿಲ್ಲದೇ ಇದ್ದರೆ ಬೆಳಗಿನ ಝಾವದ ಹೊತ್ತಾದರೂ ಮಾಡು. ಪುರಶ್ಚರಣ ಮಾಡು. ನಿನ್ನ ಅಮೂಲ್ಯ ಸಮಯವನ್ನು ಇನ್ನು ವ್ಯರ್ಥ ಮಾಡಬೇಡ. ಪ್ರಾರ್ಥನೆ

ಮತ್ತು ಧ್ಯಾನದಲ್ಲಿ ತನ್ಮಯನಾಗು. ಕೆಲವು ದಿನ ಸಾಧನೆ ಮಾಡಿದರೆ ಆಧ್ಯಾತ್ಮಿಕ ಸತ್ಯಗಳೆಲ್ಲ ತಮಗೆ ತಾವೇ ವ್ಯಕ್ತವಾಗುವುವು.

ಸಾಧಕ ರಾತ್ರಿ ಹೊತ್ತು ಹೆಚ್ಚು ಊಟ ಮಾಡಕೂಡದು. ಮೊದಲು ನೀನು ತೆಗೆದುಕೊಳ್ಳುತ್ತಿದ್ದ ಮುಕ್ಕಾಲರಷ್ಟು ತೆಗೆದುಕೊ. ನಂತರ ಅದನ್ನು ಅರ್ಧಕ್ಕೆ ಇಳಿಸು. ಮೊದಮೊದಲು ಸ್ವಲ್ಪ ದೇಹಾಲಸ್ಯವಾಗಬಹುದು. ಕೆಲವು ಕಾಲದ ಮೇಲೆ ದೇಹತಾನೇ ಸರಿಯಾಗುವುದು, ಚುರುಕಾಗಿ ಆರೋಗ್ಯವಾಗಿರುವುದು.

(ಅನಂತರ ಸ್ವಾಮಿಜಿಯವರು ತಾವು ಸಾಧನೆ ಮಾಡುತ್ತಿದ್ದ ಕಾಲದಲ್ಲಿ ದಿನಕ್ಕೆ ಒಂದು ಹೊತ್ತು ಊಟ ಮಾತ್ರ ಮಾಡುತ್ತಿದ್ದೆವು ಎಂದು ಹೇಳಿದರು.)

ಮೊದಲು ಸಾಧಕ ಮೋಕ್ಷ ಮಾರ್ಗವನ್ನು ಯಾರಾದರೂ ಒಬ್ಬ ಮಹಾಪುರುಷರನ್ನು ಕೇಳಿ ತಿಳಿದುಕೊಳ್ಳಬೇಕು. ನಂತರ ಅದನ್ನು ಎಡೆಬಿಡದೆ ಅನುಸರಿಸಬೇಕು. ನಿರ್ಲಕ್ಷ್ಯದಿಂದ ಮಾಡಿದರೆ ಹೆಚ್ಚು ಜಯ ದೊರಕದು. ಸಾಧನೆ ಮಾಡುವುದನ್ನು ಮಧ್ಯದಲ್ಲಿ ಬಿಟ್ಟರೆ, ತನ್ನ ಗುರಿಯನ್ನು ಸೇರಬೇಕಾದರೆ ನಂತರ ಎರಡರಷ್ಟು ಕಷ್ಟಪಡಬೇಕಾಗುವುದು. ನಮ್ಮ ಪ್ರಯತ್ನವಾವುದೂ ನಿಷ್ಫಲವಾಗುವುದಿಲ್ಲ. ಯಾರು ಆಧ್ಯಾತ್ಮಿಕ ಜೀವನವನ್ನು ನಡೆಸುತ್ತಿರುವರೋ ಅವರಿಂದ ಕಾಮ, ಕ್ರೋಧ, ಆಸೆ, ಇವು ಕ್ರಮೇಣ ಮಾಯವಾಗುವುವು.

ಈಗ ನಿಮ್ಮ ಮನಸ್ಸಿನ ಮೇಲೆ ರಜಸ್ಸು ಮತ್ತು ತಮಸ್ಸು ಆವರಿಸಿರುವುದು. ಅದನ್ನು ಶುದ್ಧ ಮಾಡಿ, ಸೂಕ್ಷ್ಮ ಮಾಡಿ, ಕ್ರಮೇಣ ಸತ್ತ್ವದ ಸ್ಥಿತಿಗೆ ತರಬೇಕು. ಆಗ ಸಾಧನೆಯಿಂದ ಸಂತೋಷ ಬರುವುದು. ಹೆಚ್ಚು ಕಾಲವನ್ನು ಅದರಲ್ಲಿ ಕಳೆಯಬೇಕೆಂದು ಆಸೆ ಹುಟ್ಟುವುದು. ಕ್ರಮೇಣ ಮನಸ್ಸು ಪರಿಶುದ್ಧವಾದ ಮೇಲೆ ಸ್ವಾಭಾವಿಕವಾಗಿಯೇ ಆಧ್ಯಾತ್ಮಿಕ ಜೀವನವನ್ನು ಸ್ವೀಕರಿಸುವೆ. ಮನಸ್ಸು ಈಗ ಸ್ಥೂಲ ಕ್ಷೇತ್ರದಲ್ಲಿರುವುದು. ಆದ ಕಾರಣವೇ ಸ್ಥೂಲ ವಿಷಯಗಳ ಮೇಲೆ ಹೋಗುವುದು. ಅದು ಜಾಗ್ರತವಾದ ಮೇಲೆ ಕ್ರಮೇಣ ಸ್ವಾಭಾವಿಕವಾಗಿಯೇ ಆಧ್ಯಾತ್ಮಿಕ ವಿಷಯಗಳ ಮೇಲೆ ಹೋಗುವುದು. ಅದು ಸೂಕ್ಷ್ಮವಾದ ಮೇಲೆ ಅದರ ಸಾಮರ್ಥ್ಯವೂ ಹೆಚ್ಚುವುದು. ಸಾಧಕ ಬಹಳ ಬೇಗ ದೇವರ ವಿಷಯವನ್ನು ತಿಳಿದುಕೊಳ್ಳುವನು.

ಧ್ಯಾನಕ್ಕೆ ಕುಳಿತಾಗ ಮೊದಲು ಆನಂದಮಯ ಭಗವಂತನನ್ನು

ಕುರಿತು ಆಲೋಚಿಸಿ. ಇದು ನಿಮ್ಮ ಮನಸ್ಸು ಮತ್ತು ನರಗಳ ಮೇಲೆ ಹಿತವಾದ ಪರಿಣಾಮವನ್ನುಂಟುಮಾಡುವುದು. ಇಲ್ಲದೇ ಇದ್ದರೆ ಧ್ಯಾನ ದಲ್ಲಿ ಸಂತೋಷವಿರುವುದಿಲ್ಲ. ಕಷ್ಟವಾಗುವುದು. ನಿನ್ನ ಇಷ್ಟದೇವರು ಹಸನ್ಮುಖಿಯಾಗಿ ಇರುವನು, ಆನಂದ ಮಯನವನು ಎಂದು ಆಲೋಚಿಸಿ.

ನಿಮ್ಮ ಕಾಲವನ್ನು ವ್ಯರ್ಥ ಮಾಡಬೇಡಿ. ಇಂದ್ರಿಯಗಳು ಈಗ ಬಲವಾಗಿವೆ. ಅವನ್ನು ನಿಗ್ರಹದಲ್ಲಿಡಬೇಕು. ಇದೇನೋ ನಿಸ್ಸಂಶಯ ವಾಗಿಯೂ ಕಷ್ಟಸಾಧ್ಯ ಕೆಲಸ. ಆದರೆ ಏಳೆಂಟು ವರುಷ ಬಿಡುವಿಲ್ಲದ ಸಾಧನೆಮಾಡಿ. ನಂತರ ನಿಮ್ಮ ಸಾಧನೆಯ ಪ್ರತಿಫಲವಾಗಿ ಶಾಂತಿ ಆನಂದ ವನ್ನು ಅನುಭವಿಸುವಿರಿ. ಅನೇಕ ಸ್ತ್ರೀ ಭಕ್ತೆಯರಿಗೆ ಆಧ್ಯಾತ್ಮಿಕ ಅನುಭವಗಳಾಗಿವೆ. ನೀವು ಕೂಡ ಅದಕ್ಕೆ ಪ್ರಯತ್ನಪಡಬೇಡವೆ? ಗಂಡಸರಿಗಿಂತ ಹೆಂಗಸರಲ್ಲಿ ಹೆಚ್ಚು ಶ್ರದ್ಧೆ ಇರುವುದು. ಆದಕಾರಣವೆ ಅವರು ಪುರುಷರಿಗಿಂತ ಬೇಗ ಮುಂದುವರಿಯುವುದು.

ನನ್ನನ್ನು ನೆಚ್ಚಿ, ದೇವರು ಯಾವಾಗಲೂ ನಿಮ್ಮೊಂದಿಗೆ ಇರುವನು. ನೀವು ಸ್ವಲ್ಪ ಸಾಧನೆ ಮಾಡಿದರೆ ಅವನು ತನ್ನ ಕೈಗಳನ್ನು ನಿಮ್ಮ ಸಹಾ ಯಕ್ಕೆ ನೀಡುವನು. ಅವನೇ ನಮ್ಮನ್ನು ಎಲ್ಲಾ ದುಃಖ ಕಷ್ಟಗಳಿಂದಲೂ ಸಂರಕ್ಷಿಸುತ್ತಿರುವನು. ಅವನ ಕೃಪೆಗೆ ಪಾರವಿಲ್ಲ! ಅದನ್ನು ಹೇಗೆ ನಾನು ನಿನಗೆ ವಿವರಿಸಬಲ್ಲೆ?

ನೀನು ಆಧ್ಯಾತ್ಮಿಕ ವಿಷಯಗಳನ್ನು ಕೇವಲ ಕೇಳುತ್ತಿರುವೆ. ಈಗ ಅದನ್ನು ಪ್ರತ್ಯಕ್ಷ ಮಾಡಿಕೊಳ್ಳಿ. ಬೇಕಾದಷ್ಟು ಓದಿರುವೆ, ಆಲೋಚನೆ ಮಾಡಿರುವೆ. ಈಗ ಸ್ವಲ್ಪ ಸಾಧನೆ ಮಾಡು. ಮೊದಲು ಯಾವ ಭಗವಂತನ ಭಾವ ನಿನಗೆ ಇಷ್ಟವೋ ಅದನ್ನು ತೆಗೆದುಕೊ. ನಿನ್ನ ರೀತಿಯ ಸಾಧನೆ ಯನ್ನೇ ನೀನು ಅನುಸರಿಸು. ಅದರ ಮೂಲಕ ನೀನು ದೇವರನ್ನು ಕಂಡ ಮೇಲೆ ಉಳಿದ ಭಾವಗಳಲ್ಲಿ ಮತ್ತು ಇತರ ಮಾರ್ಗಗಳಲ್ಲಿ ದೇವ ರನ್ನು ನೋಡುವುದಕ್ಕೆ ಸಂತೋಷವಾಗುವುದು.

ಜಪ ಮಾಡುವಾಗ ತನ್ನ ಇಷ್ಟ ದೇವತೆಯ ಮೇಲೆ ಧ್ಯಾನವನ್ನು ಮಾಡಬೇಕು. ಇಲ್ಲದೆ ಇದ್ದರೆ ಜಪದಿಂದ ಪ್ರಯೋಜನವಿಲ್ಲ. ಆಕಾರ ವನ್ನೆಲ್ಲಾ ಆಲೋಚಿಸುವುದಕ್ಕೆ ಸಾಧ್ಯವಿಲ್ಲದೇ ಇದ್ದರೂ ಸ್ವಲ್ಪ ಭಾಗ ವನ್ನಾದರೂ ಮಾಡಿ, ಇಷ್ಟದೇವತೆಯ ಪಾದಕಮಲಗಳ ಮೇಲೆ ನಿಮ್ಮ ಧ್ಯಾನವನ್ನು ಪ್ರಾರಂಭಿಸಿ. ಮೊದಲು ಇದು ನಿಮಗೆ ಸಾಧ್ಯವಿಲ್ಲದೇ ಇದ್ದರೂ ಪ್ರಯತ್ನಿಸಿ. ಜಯಿಸುವವರೆಗೆ ನೀವು ಏತಕ್ಕೆ ನಿಲ್ಲಿಸಬೇಕು? ನೀವು

ಗೆಲ್ಲಲೇ ಬೇಕು. ಸಾಧನೆ ಎಲ್ಲವನ್ನೂ ಸುಲಭ ಮಾಡುವುದು.

ಧ್ಯಾನ ಮಾಡುವುದು ಸುಲಭವೇ? ಇದು ಸಮಾಧಿಗೆ ಮಾತ್ರ ಎರಡನೆಯದೆಂಬುದನ್ನು ಜ್ಞಾಪಕದಲ್ಲಿಡಿ. ಎಲ್ಲವನ್ನೂ ದೇವರಿಗೆ ಬಿಡಿ. ಅವನಲ್ಲಿ ಶರಣಾಗತರಾಗಿ. ನಂತರ ನಿಮ್ಮ ಸಾಧನೆಯ ಮೂಲಕ ಆತ್ಮ ಸಮರ್ಪಣೆ ಮುಂತಾದುವೆಲ್ಲ ಅಂತರಾಳದಿಂದ ಬರುವುವು.

೩

## ಪೂಜೆ ಮತ್ತು ಧ್ಯಾನ

ಶಿಷ್ಯ: ಸ್ವಾಮಿಜಿ, ನೀವು ನಮಗೆ ಪೂಜೆ, ಧ್ಯಾನ, ಅಧ್ಯಯನ, ಬ್ರಹ್ಮಚರ್ಯ ಮುಂತಾದುವನ್ನು ಕುರಿತು ಹೇಳಿದಿರಿ. ಪೂಜೆ ಎಂದರೇನು?

ಸ್ವಾಮಿಜಿ: ಪೂಜೆ, ಬಾಹ್ಯ ಮತ್ತು ಮಾನಸಿಕವಾಗಿರುವುದು. ಬಾಹ್ಯ ಪೂಜೆಯಲ್ಲಿ ಹೂವು, ಗಂಧ, ನೀರು ಮುಂತಾದ ಸಲಕರಣೆ ಬೇಕಾಗಿವೆ. ಯಾವಾಗಲೂ ಇವು ದೊರಕುವುದಿಲ್ಲ. ಆದಕಾರಣವೇ ಮಾನಸಿಕ ಪೂಜೆ ಹೆಚ್ಚು ಸರಾಗ. ನಿನ್ನ ಇಷ್ಟದೇವತೆಯನ್ನು ಮನಸ್ಸಿನಲ್ಲಿಯೇ ಪಾದ್ಯ, ಹೂವು ಗಂಧದಿಂದ ಪೂಜಿಸಿದ ಮೇಲೆ ಧ್ಯಾನ ಮತ್ತು ಮಾನಸಿಕ ಜಪವನ್ನು ಪ್ರಾರಂಭಿಸಿ. ಮಾನಸಿಕ ಜಪದಲ್ಲಿ ತುಟಿಯನ್ನು ಅಲ್ಲಾಡಿಸದೆ ಮಂತ್ರವನ್ನು ಜಪಿಸಬೇಕು. ಆದರೆ ಸಾಧಾರಣ ಜಪ ಮಾಡುವಾಗ ಮಂತ್ರೋಚ್ಚಾರಣೆಯ ಸಮಯದಲ್ಲಿ ತುಟಿ ಚಲಿಸುವುದು.

ಧ್ಯಾನಮಾಡುವಾಗ ನಿನ್ನ ಇಷ್ಟದೇವತೆ ಸ್ವಯಂಪ್ರಕಾಶಮಾನನಾಗಿರುವನೆಂದು ಯೋಚಿಸಬೇಕು. ಎಲ್ಲವೂ ಅವನ ಕಾಂತಿಯಿಂದ ಬೆಳಗುತ್ತಿದೆ ಎಂದು ತಿಳಿಯಿರಿ. ಇದು ಸ್ಥೂಲದಲ್ಲಿ ಚೇತನಾಮಯವಾಗಿರುವುದೆಂದು ಭಾವಿಸಿ. ಇಂತಹ ಧ್ಯಾನ ಕ್ರಮೇಣ ಭಗವಂತನ ನಿರಾಕಾರ ಮತ್ತು ಅನಂತತೆಯ ಧ್ಯಾನಕ್ಕೆ ತಿರುಗುವುದು. ಮೊದಲು ಸಾಧಕ ಕಲ್ಪನೆಯ ಸಹಾಯವನ್ನು ತೆಗೆದುಕೊಳ್ಳಬೇಕು. ನಂತರ ಅವನ ಆಧ್ಯಾತ್ಮಿಕತೆ ಅಭಿವೃದ್ಧಿಯಾದಂತೆ ಭಗವಂತನ ಇರವನ್ನು ಅವನು ತನ್ನೊಳಗೆ ಅನುಭವಿಸುವನು. ಕೊನೆಗೆ ಅತ್ಯುತ್ತಮ ಆಧ್ಯಾತ್ಮಿಕ ಸಾಕ್ಷಾತ್ಕಾರವಾದಾಗ ಸತ್ಯವನ್ನು ಸಂದರ್ಶಿಸುವನು. ಆಗ ಅವನು ಬೇರೊಂದು ಪ್ರಪಂಚಕ್ಕೆ ಹೋದಂತೆ ಆಗುವನು. ಅದರೊಂದಿಗೆ ನಮ್ಮ ಸ್ಥೂಲಪ್ರಪಂಚವನ್ನು ಹೋಲಿಸಿದಾಗ ಇದೊಂದು ನೆರಳಿನಂತೆ ಅಸತ್ಯವಾಗುವುದು. ಆಗ ಮನಸ್ಸು ಸವಿಕಲ್ಪಸಮಾಧಿಯಲ್ಲಿ ಮಗ್ನವಾಗುವುದು.

ನಂತರ ನಿರ್ವಿಕಲ್ಪ ಸಮಾಧಿ ಬರುವುದು. ಆಗ ಮನಸ್ಸು ಮತ್ತು ಮಾತಿಗೆ ಅತೀತವಾದ ಅನುಭವವಾಗುವುದು. ಈ ಸ್ಥಿತಿಯಲ್ಲಿ ನೋಡುವುದು ಏನೂ ಇರುವುದಿಲ್ಲ, ಕೇಳುವುದೂ ಏನೂ ಇರುವುದಿಲ್ಲ. ಎಲ್ಲಾ ಅನಂತತೆಯಲ್ಲಿ ತಲ್ಲೀನವಾಗುವುದು.

ಈ ಸ್ಥಿತಿಗೆ ಮುಟ್ಟಿದಮೇಲೆ ಪುನಃ ತೋರಿಕೆಯ ಪ್ರಪಂಚದಮೇಲೆ ಮನಸ್ಸನ್ನು ತರಬೇಕಾದರೆ ಕಷ್ಟ. ಈ ಸ್ಥಿತಿ ದ್ವೈತಾದ್ವೈತ ವಿವರ್ಜಿತ. ಕೆಲವರು ಈ ಸ್ಥಿತಿಗೆ ಮುಟ್ಟಿದಮೇಲೆ, ನಂತರ ಆಧ್ಯಾತ್ಮಿಕ ಅನುಭವಕ್ಕೆ ದೇಹ ಒಂದು ಆತಂಕವೆಂದು ಭಾವಿಸಿ ಸಮಾಧಿಯಲ್ಲಿ ಅದನ್ನು ತ್ಯಜಿಸುವರು. ಇದೊಂದು ಮಡಕೆಯನ್ನು ಒಡೆದಂತೆ.

ಆಧ್ಯಾತ್ಮಿಕ ಚರಮ ಅನುಭವವನ್ನು ವಿವರಿಸುವುದಕ್ಕೆ ಶ್ರೀರಾಮಕೃಷ್ಣರು ಒಂದು ಸುಂದರವಾದ ಉಪಮಾನವನ್ನು ಕೊಡುತ್ತಿದ್ದರು. ಒಂಭತ್ತು ಮಡಕೆಗಳಲ್ಲಿ ನೀರು ಇದೆ ಎಂದು ಇಟ್ಟುಕೊಳ್ಳಿ. ಪ್ರತಿಯೊಂದರಲ್ಲಿಯೂ ಸೂರ್ಯಪ್ರತಿಬಿಂಬಿಸುತ್ತಿರುವನು. ನೀವು ಮಡಕೆಯನ್ನು ಒಂದಾದಮೇಲೊಂದು ಒಡೆಯಿರಿ. ಕೊನೆಗೆ ಒಂದು ಉಳಿಯುವುದು. ಅದರಲ್ಲಿ ಮಾತ್ರ ಸೂರ್ಯ ಪ್ರತಿಬಿಂಬಿಸುತ್ತಿರುವನು. ಕೊನೆಗೆ ಅದೂ ಒಡೆಯುವುದು. ಆಗ ಏನು ಇರುವುದೋ ಅದು ಇದ್ದೇ ಇರುವುದು. ಅದನ್ನು ನೋಡುವುದಕ್ಕೂ ಆಗುವುದಿಲ್ಲ, ವಿವರಿಸುವುದಕ್ಕೂ ಆಗುವುದಿಲ್ಲ.

ಪ್ರಶ್ನೆ: ಸ್ವಾಮಿಜಿ, ಕೆಲವರು ಇಷ್ಟವನ್ನು ಸರ್ವವ್ಯಾಪಿಯಾದ ಶಕ್ತಿಯೆಂದು ಭಾವಿಸುವರು. ಇದೂ ಒಂದು ಬಗೆಯ ಧ್ಯಾನವಲ್ಲವೇ?

ಸ್ವಾಮಿಜಿ: ಹೌದು, ನಿಜ. ಪ್ರತಿಯೊಬ್ಬರೂ ಇಂತಹ ಧ್ಯಾನವನ್ನು ಅಭ್ಯಾಸಮಾಡಬೇಕು. ಆದರೆ ಮೊದಲು ಆಧ್ಯಾತ್ಮಿಕ ಜೀವನದಲ್ಲಿ ಸ್ವಲ್ಪ ಮುಂದುವರಿಯಬೇಕು. ಮುಂಚೆ ಅಲ್ಲ. ತನ್ನ ಇಷ್ಟವನ್ನು ಎಲ್ಲಾ ಕಡೆಯಲ್ಲಿಯೂ ನೋಡಬೇಕು. ಯಾರು ಸಗುಣ ಸಾಕಾರನೊ ಅವನು ನಿರ್ಗುಣ, ನಿರಾಕಾರನೂ ಆಗಿರುವನು. ಅವನು ಎಲ್ಲರಲ್ಲಿಯೂ ಇರುವನು. ಭೂಮಿ ನೀರು, ಬೆಟ್ಟ ಕಣಿವೆ, ಆಕಾಶ ನಕ್ಷತ್ರ ಎಲ್ಲಾ ಕಡೆಯೂ ಇರುವನು.

ಪ್ರಶ್ನೆ: ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ಗುರುಸೇವೆ ಅತ್ಯಾವಶ್ಯಕವೆಂದು ಶಾಸ್ತ್ರ ಸಾರುವುದು. ಇದು ಎಷ್ಟುಮಟ್ಟಿಗೆ ನಿಜ?

ಸ್ವಾಮಿಜಿ: ಇದು ಮೊದಲು ಆವಶ್ಯಕ. ಅನಂತರ ಒಬ್ಬನ ಮನಸ್ಸೆ ಗುರುವಿನ ಕೆಲಸವನ್ನು ಮಾಡುವುದು. ಗುರುವನ್ನು ಸಾಧಾರಣ

ಮನುಷ್ಯನೆಂದು ನೋಡಬಾರದು. ಭಗವಂತ ನೆಲಸಿರುವ ಒಂದು ದೇವಾಲಯ ಅವರ ದೇಹ. ಗುರುವನ್ನು ಈ ದೃಷ್ಟಿಯಿಂದ ಸೇವಿಸಿದರೆ ಆತನಲ್ಲಿ ಭಕ್ತಿ, ಪ್ರೇಮ ಹುಟ್ಟುವುದು. ಇದನ್ನು ನಂತರ ಭಗವಂತನ ಕಡೆಗೆ ತಿರುಗಿಸಬಹುದು.

ಸಹಸ್ರಾರದಲ್ಲಿ ಶ್ರೀಗುರುವನ್ನು ಕೆಲವು ಸಾಧಕರು ಧ್ಯಾನಿಸುವರು. ಅನಂತರ ಗುರುವನ್ನು ಇಷ್ಟಮೂರ್ತಿಯಲ್ಲಿ ಐಕ್ಯಗೊಳಿಸುವರು. ಶ್ರೀರಾಮಕೃಷ್ಣರು ವಿಶದವಾಗಿ ಹೀಗೆ ಹೇಳುತ್ತಿದ್ದರು "ಶಿಷ್ಯನಿಗೆ ಗುರುಪ್ರತ್ಯಕ್ಷವಾಗಿ, ನೋಡು! ನಿನ್ನಿಷ್ಟವೆಂದು ತೋರಿಸಿ, ಅದರಲ್ಲಿ ಗುರು ಐಕ್ಯನಾಗುವನು." ಗುರು ಇಷ್ಟದೇವರಿಗಿಂತ ಬೇರೆ ಅಲ್ಲ. ಆಧ್ಯಾತ್ಮಿಕ ಜೀವನದಲ್ಲಿ ಎಷ್ಟು ಸಾಧನೆಗಳಿವೆ. ಅದನ್ನೆಲ್ಲ ನಿನಗೆ ಹೇಗೆ ಹೇಳುವುದು?

ಶ್ರದ್ಧೆಯಿಂದ ಮುಕ್ತಿಮಾರ್ಗವನ್ನು ಅನುಸರಿಸು. ಸಾಧನೆಯಿಂದ ಮನಸ್ಸು ಶುದ್ಧವಾದಮೇಲೆ ಆಧ್ಯಾತ್ಮಿಕ ಜೀವನದ ಸತ್ಯವನ್ನು ತಿಳಿದುಕೊಳ್ಳುವೆ. ಅವಕ್ಕೆ ಒಂದು ಅಂತ್ಯವಿಲ್ಲವೆಂಬುದನ್ನು ಗಮನಿಸಿ. ಎಣಿಕೆಗೆ ನಿಲುಕಲಾರವು ಅವು. ಸಾಧಕ ಅವುಗಳಲ್ಲಿ ತನ್ಮಯನಾಗಿರುವನು.

ಪ್ರಶ್ನೆ: ಸಾಧಕನಿಗೆ ಸ್ವಲ್ಪ ಆನಂದದ ಸವಿ ದೊರೆತರೆ ಅದು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರೆಯಲು ಒಂದು ಭರವಸೆಯನ್ನು ಕೊಡುವುದು ಅಲ್ಲವೆ?

ಸ್ವಾಮಿಜಿ: ನಿಜ. ಆದರೆ ಉಚ್ಚವರ್ಗದ ಆಧ್ಯಾತ್ಮಿಕ ಅನುಭವದಲ್ಲಿ ಆನಂದವೂ ಇಲ್ಲ ದುಃಖವೂ ಇಲ್ಲ, ಸುಖವೂ ಇಲ್ಲ ಯಾತನೆಯೂ ಇಲ್ಲ, ಅಲ್ಲಿ ವ್ಯಕ್ತವೂ ಇಲ್ಲ ಅವ್ಯಕ್ತವೂ ಇಲ್ಲ. ನೀನು ಹೇಳುವ ಆನಂದ ಸಾಧನೆಯ ಸಮಯದಲ್ಲಿ ಸ್ವಲ್ಪ ಸಹಾಯಮಾಡುವುದು ಅಷ್ಟೆ. ದೋಣಿ ತನ್ನ ಗುರಿಯನ್ನು ಸೇರದೇ ಇರುವವರೆಗೆ ಅನುಕೂಲವಾದ ಗಾಳಿಗೆ ಕಾಯುವುದು. ಆದರೆ ಒಮ್ಮೆ ಗುರಿಯನ್ನು ಸೇರಿದಮೇಲೆ ಅದಕ್ಕೆ ಅನುಕೂಲ ಮತ್ತು ಪ್ರತಿಕೂಲದ ಗಾಳಿಯ ಆವಶ್ಯಕತೆಯೇ ಇಲ್ಲ. ಅನುಕೂಲವಾದ ಗಾಳಿಯಂತೆ ಆನಂದ ಸಾಧಕನಿಗೆ ಮುಂದುವರಿಯಲು ಸಹಾಯ ಮಾಡುವುದು.

ಜ್ಞಾನ, ಜ್ಞೇಯ, ಜ್ಞಾತೃ ಎಲ್ಲವೂ ಬ್ರಹ್ಮನಲ್ಲಿ ತಲ್ಲೀನವಾಗುವುದು. ಶಾಸ್ತ್ರ ಇಷ್ಟನ್ನು ಮಾತ್ರ ಹೇಳುವುದು ಅನಂತರ ಏನಾಗುವುದೋ ಅದನ್ನು ವಿವರಿಸುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಸಾಧನೆಯಿಂದ ಮಾತ್ರ ಒಬ್ಬನು ಇದನ್ನು ಸಾಕ್ಷಾತ್ಕರಿಸಬೇಕು, ಅಷ್ಟೆ.

ಆಸೆ ಆತಂಕಗಳಿಲ್ಲಗ ಅನಂತವ್ಯಾಪ್ತಿಯ ಸ್ಥಿತಿ **ಎಷ್ಟು** ಅದ್ಭುತ ವಾದುದು! **ಈ** ಭಾವನೆಯೇ ಮನಸ್ಸನ್ನು ಮೋಹಿಸುತ್ತಿರುವುದು. ಕೆಲವು ಸಾಧಕರು ನಿತ್ಯ, ಲೀಲೆಯಿಂದ ಬೇರೆ ಎಂದು ಭಾವಿಸುವರು. ಮತ್ತೆ ಕೆಲವರು ಎರಡೂ ಒಂದೇ ಎಂದು ಭಾವಿಸುವರು. ಮತ್ತೊಂದು ಆಧ್ಯಾತ್ಮಿಕ ಅನುಭವ ನಿತ್ಯ ಮತ್ತು ಲೀಲೆ ಎರಡನ್ನೂ ಮೀರಿರುವುದು.

## ೪

## ಕುಂಡಲಿನಿ

ಪ್ರಶ್ನೆ : ಸ್ವಾಮಿಜಿ, ಕುಂಡಲಿನಿಯನ್ನು ಹೇಗೆ ಜಾಗ್ರತಗೊಳಿಸುವುದು.

ಸ್ವಾಮಿಜಿ: ಜಪ, ಧ್ಯಾನ ಮುಂತಾದ ಸಾಧನೆಯಿಂದ. ಕೆಲವು ಯೋಗಿಗಳು ಅದನ್ನು ಜಾಗ್ರತಗೊಳಿಸಬೇಕಾದರೆ ಬೇರೆ ಬಗೆಯ ಧ್ಯಾನ ಮತ್ತು ಸಾಧನೆಗಳಿವೆ ಎನ್ನುವರು. ಆದರೆ ಜಪ ಮತ್ತು ಧ್ಯಾನ ಇದಕ್ಕೆ ಅತಿ ಶ್ರೇಷ್ಠವಾದ ಮಾರ್ಗವೆಂದು ನಾನು ನಂಬುತ್ತೇನೆ. ನಮ್ಮ ಕಲಿಯುಗದಲ್ಲಿ ಜಪವೇ ಶ್ರೇಷ್ಠವಾದುದು. ಇದಕ್ಕಿಂತ ಸುಲಭವಾದ ಸಾಧನೆ ಮತ್ತೊಂದು ಇಲ್ಲ. ಆದರೆ ಮಂತ್ರೋಚ್ಚಾರಣೆಮಾಡುವಾಗ ಧ್ಯಾನವೂ ಇರಬೇಕು.

ಪ್ರಶ್ನೆ : ಧ್ಯಾನವೆಂದರೆ ಇಷ್ಟದ ಆಕಾರವನ್ನು ಯೋಚಿಸುವುದೆ?

ಸ್ವಾಮಿಜಿ: ಇದರಲ್ಲಿ ಇಷ್ಟದೇವರ ಆಕಾರ ಮತ್ತು ನಿರಾಕಾರ ಗಳೆರಡೂ ಸೇರಿವೆ.

ಪ್ರಶ್ನೆ : ಒಬ್ಬ ಸಾಕಾರ ಅಥವಾ ನಿರಾಕಾರದಮೇಲೆ ಧ್ಯಾನಮಾಡು ವುದಕ್ಕೆ ಯೋಗ್ಯನೆ ಎಂದು ನಿಷ್ಕರ್ಷಿಸುವವನು ಗುರುವೆ?

ಸ್ವಾಮಿಜಿ: ಹೌದು. ಆದರೆ ಶುದ್ಧಮನಸ್ಸೆ ಗುರುವಿನ ಕೆಲಸವನ್ನು ಮಾಡುವುದು. ಕೆಲವು ವೇಳೆ ಮನಸ್ಸಿಗೆ ಆಕಾರದಮೇಲೆ ಆಸೆ; ಕೆಲವು ವೇಳೆ ನಿರಾಕಾರದಮೇಲೆ ಆಸೆ. ಸಾಧನೆಮಾಡುತ್ತಾ ಹೋದಂತೆ ಅವನ ತಿಳುವಳಿಕೆಯೂ ಹೆಚ್ಚುವುದು. ಆಗ ಮನಸ್ಸೆ ಮಾರ್ಗ ತೋರುವುದು.

ಮಾನಸಿಕ ಶಕ್ತಿ ಹಲವು ಆಕರ್ಷಣೆಗಳಿಗೆ ಒಳಗಾಗಿ ನಷ್ಟಹೊಂದು ತ್ತದೆ, ಎಂದು ಯೋಗವಾಸಿಷ್ಠ ರಾಮಾಯಣ ಹೇಳುವುದು. ಒಂದು ಭಾಗ ದೇಹದ ಕಡೆ, ಒಂದು ಭಾಗ ಇಂದ್ರಿಯಗಳ ಕಡೆ, ಮತ್ತೊಂದು ಭಾಗ ವಿಷಯವಸ್ತುಗಳ ಕಡೆ ಹೋಗುವುದು. ಮನಸ್ಸು ಹಲವಾರು ವಸ್ತುಗಳ ಕಡೆ ಬಂಧಿಸಲ್ಪಟ್ಟಿದೆ. ಈ ಬಂಧನಗಳನ್ನೆಲ್ಲ ಛೇದಿಸಿ. ಚದುರಿಹೋದ

ಮಾನಸಿಕ ಶಕ್ತಿಯನ್ನೆಲ್ಲ ಏಕಾಗ್ರಮಾಡಿ, ಒಂದು ಕಡೆ ಹರಿಯುವಂತೆ ಮಾಡಿ. ಆಧ್ಯಾತ್ಮಿಕ ಜೀವನದ ಕೆಲಸವೇ ಇದು.

ಮನಸ್ಸನ್ನು ಏಕಾಗ್ರಮಾಡಿ, ಗುರಿಮುಟ್ಟುವವರೆಗೂ ಸಾಧನೆಯ ಕಡೆ ತಿರುಗಿಸಿ ಹೋರಾಡಿ. ಪ್ರಯತ್ನಪಡಿ, ಈಗ ನೀವು ಇನ್ನೂ ಯುವಕರು. ಸಾಧನೆಗೆ ಇದೇ ಸಮಯ. ವಯಸ್ಸಾದಮೇಲೆ ನೀವು ಏನನ್ನೂ ಮಾಡಲಾರಿರಿ. ಪ್ರಾರಂಭದಲ್ಲಿ ನಮ್ಮ ದೈನಂದಿನ ಕರ್ಮದಂತೆ ಪ್ರತಿದಿನವೂ ಸ್ವಲ್ಪ ಸಾಧನೆಮಾಡುವುದು ಅವಶ್ಯಕ. ಮನಸ್ಸು ಇಚ್ಛಿಸಲಿ ಬಿಡಲಿ, ತಪ್ಪದೇ ಇವನ್ನು ಮಾಡಬೇಕು.

ಶ್ರದ್ಧೆಯಿಂದ ಸಾಧನೆ ಪ್ರಾರಂಭಮಾಡಿ. ಚೆದುರಿಹೋದ ಮನಸ್ಸನ್ನು ಒಂದುಗೂಡಿಸಿದರೆ ಅದೇ ಅದ್ಭುತಶಕ್ತಿಯಾಗುವುದು. ಇದನ್ನು ಜಪ, ಧ್ಯಾನ ಅಥವಾ ವಿವೇಕದಿಂದಲಾದರೂ ಮಾಡಿ. ಈ ಮಾರ್ಗಗಳೆಲ್ಲವೂ ಫಲಕಾರಿ ಎಂದು ತಿಳಿಯಿರಿ. ಯಾವುದಾದರೂ ಒಂದನ್ನು ಹಿಡಿದು ಸಾಧನೆಯಲ್ಲಿ ತನ್ಮಯರಾಗಿ. ಇನ್ನು ಪ್ರಶ್ನೆ ಬೇಡ. ಮೊದಲು ಏನನ್ನಾದರೂ ಸಾಧನೆ ಮಾಡಿ ನಂತರ ಏನಾದರೂ ಅನುಮಾನವಿದ್ದರೆ ಕೇಳಿ.

ಪ್ರಶ್ನೆ : ಸ್ವಾಮಿಜಿ, ಗುರುಕೃಪೆಯಿಂದ ಕುಂಡಲಿನಿ ಜಾಗ್ರತವಾಗುವುದು ನಿಜವೆ?

ಸ್ವಾಮಿಜಿ : ಗುರುಕೃಪೆಯಿಂದ ಕುಂಡಲಿನಿ ಜಾಗ್ರತವಾಗುವುದು ಮಾತ್ರವಲ್ಲ, ಏನನ್ನು ಬೇಕಾದರೂ ಪಡೆಯಬಹುದು. ಬ್ರಹ್ಮಜ್ಞಾನವನ್ನು ಕೂಡ ಪಡೆಯಬಹುದು. ಆದರೆ ಸುಲಭವಾಗಿ ಗುರುಕೃಪೆ ದೊರೆಯುವುದಿಲ್ಲ. ಅದನ್ನು ಪಡೆಯಲು ಮಿತಿಮೀರಿ ಪ್ರಯತ್ನಪಡಬೇಕು.

ಶಾಂತವಾಗಿ ಇರುವಾಗ ನಿಮ್ಮ ಮನಸ್ಸಿಗೆ ಏನಾದರೂ ಅದು ಸಾಧನೆ ಮಾಡಿದೆಯೆ ಎಂದು ಪ್ರಶ್ನೆ ಹಾಕಿ. ಏನೂ ಮಾಡಿಲ್ಲವೆಂದು ಅದು ಹೇಳುವುದು. ಮೊದಲು ಸ್ವಲ್ಪ ಸಾಧನೆಮಾಡಿ. ಈಗಲೇ ಪ್ರಾರಂಭಮಾಡಿ. ಇದಕ್ಕಾಗಿ ನಿಮ್ಮ ಜೀವನವನ್ನು ಮುಡುಪಾಗಿಡಿ. ಮತ್ತಾವುದನ್ನೂ ಲೆಕ್ಕಿಸಬೇಡಿ. ನಿಮ್ಮ ಆತ್ಮದ ಅಂತರಾಳಕ್ಕೆ ಮುಳುಗಿ.

೫

## ಕರ್ಮ ಮತ್ತು ಪೂಜೆ

ಸ್ವಾಮಿಜಿ : ನಿನ್ನ ಸಾಧನೆ ಹೇಗೆ ನಡೆಯುತ್ತಿದೆ?

ಶಿಷ್ಯ : ಸ್ವಾಮಿಜಿ, ಅದಕ್ಕೆ ಸಾಕಾದಷ್ಟು ಕಾಲವೇ ಸಿಕ್ಕುವುದಿಲ್ಲ. ಮಾಡುವುದಕ್ಕೆ ತುಂಬಾ ಕೆಲಸವಿದೆ,

ಸ್ವಾಮಿಜಿ : ಕಾಲ ದೊರಕದೆ ಸಾಧನೆ ಮಾಡಲಿಲ್ಲವೆನ್ನುವುದು ಭ್ರಾಂತಿ. ಅದಕ್ಕೆ ನಿಜವಾದ ಕಾರಣ ಮನಸ್ಸಿನ ಚಂಚಲತೆ.

ಕರ್ಮ ಮತ್ತು ಪೂಜೆ ಒಟ್ಟಿಗೆ ಹೋಗಬೇಕು. ಬರೀ ಆಧ್ಯಾತ್ಮಿಕ ಸಾಧನೆಗೇ ಕಾಲವನ್ನು ವಿನಿಯೋಗಿಸಲು ಸಾಧ್ಯವಾದರೆ ಬಹಳ ಒಳ್ಳೆಯದೇ ಸರಿ. ಆದರೆ ಎಷ್ಟು ಜನ ಹಾಗೆ ಮಾಡಬಲ್ಲರು? ಎರಡು ಬಗೆಯ ಮನುಷ್ಯರು ಏನನ್ನೂ ಮಾಡದೆ ತೆಪ್ಪಗೆ ಕುಳಿತಿರುವರು. ಒಬ್ಬ ಕಡು ಮೂರ್ಖ. ಕೆಲಸಮಾಡುವುದಕ್ಕೆ ಗೊತ್ತಿಲ್ಲ. ಮತ್ತೊಬ್ಬ ಕರ್ಮವನ್ನು ಮೀರಿಹೋದ ಒಬ್ಬ ಮಹಾತ್ಮ. ಕರ್ಮಮಾಡದೆ ನೈಷ್ಕರ್ಮ್ಯದ ಸ್ಥಿತಿ ಪ್ರಾಪ್ತವಾಗುವುದಿಲ್ಲ ಎನ್ನುವುದು ಗೀತೆ. ಕರ್ಮನಿಷ್ಠೆಯಿಂದಲೇ ಒಬ್ಬ ಜ್ಞಾನ ಪಡೆಯಬಹುದು. ನಾವು ನೋಡುವಂತೆ ಕರ್ಮವನ್ನು ತೊರೆದ ನಿವೃತ್ತಿ ಜೀವನ ಕೈಕೊಂಡವರು ಕೂಡ ಗುಡಿಸಲು ಕಟ್ಟುವುದು, ಅಡಿಗೆ ಮಾಡುವುದು, ಮುಂತಾದ ಕೆಲಸದಲ್ಲಿ ಬೇಕಾದಷ್ಟು ಸಮಯವನ್ನು ಕಳೆಯಬೇಕಾಗಿದೆ.

ನಿಮ್ಮ ಸ್ವಂತಕ್ಕಾಗಿ ಕೆಲಸಮಾಡುವ ಬದಲು ದೇವರಿಗಾಗಿ ಕೆಲಸ ಮಾಡಿ. ನೀವು ಮಾಡುವ ಕೆಲಸವೆಲ್ಲ ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದರದು ಎಂದು ಭಾವಿಸಿ. ಈ ದೃಷ್ಟಿಯಿಂದ ಕೆಲಸಮಾಡಿದರೆ ಕರ್ಮ ನಿಮ್ಮನ್ನು ಬಂಧಿಸುವುದಿಲ್ಲ. ಅದೂ ಅಲ್ಲದೆ ನಿಮಗೆ ಎಲ್ಲಾ ವಿಧದಿಂದಲೂ ಎಂದರೆ ನಿಮ್ಮ ಆಧ್ಯಾತ್ಮಿಕ, ನೈತಿಕ, ಬೌದ್ಧಿಕ, ದೈಹಿಕ ಎಲ್ಲವೂ ಉತ್ತಮವಾಗುವುದು. ಈ ಮಹಾಪುರುಷರ ಅಡಿದಾವರೆಯಲ್ಲಿ ನಿನ್ನ ತನುಮನವನ್ನು ಅರ್ಪಿಸು. ನಿನ್ನ ಬಾಳನ್ನೆಲ್ಲಾ ಅವರಿಗೆ ನಿವೇದಿಸು. ಅವರ ಆಳಾಗಿ "ನನ್ನ ದೇಹ ಮನಸ್ಸು ಎಲ್ಲವನ್ನೂ ನಿಮಗೆ ಅರ್ಪಿಸುತ್ತೇನೆ. ಅದನ್ನು ನೀವು ಯಾವ ರೀತಿಯಲ್ಲಿ ಬೇಕಾದರೂ ಉಪಯೋಗಿಸಿಕೊಳ್ಳಿ. ನನ್ನ ಕೈಲಾದಮಟ್ಟಿಗೆ ನಿಮಗೆ ದುಡಿಯುತ್ತೇನೆ" ಎನ್ನಿ. ನೀನು ಹೀಗೆ ಮಾಡಿದರೆ ನಿನ್ನ ಆಧ್ಯಾತ್ಮಿಕ ಜೀವನದ ಜವಾಬ್ದಾರಿ ಅವರದಾಗುವುದು. ನೀನು ನಂತರ ಚಿಂತೆಪಡಬೇಕಾಗಿಲ್ಲ. ಒಳ್ಳೆಯ ದೃಷ್ಟಿಯಿಂದ ನೀನು ಅವರಲ್ಲಿ ಶರಣಾಗತನಾಗಬೇಕು. ಅನುಮಾನಿಸುತ್ತಾ, ಬಾಯಲ್ಲಿ ದೇವರ ಹೆಸರು ಹೇಳುತ್ತ ಕೈಯಿಂದ ಬಟ್ಟೆಯನ್ನು ಮೇಲೆ ಎತ್ತುತ್ತ ಇರಕೂಡದು.

[ಇದು ಶ್ರೀರಾಮಕೃಷ್ಣ ಪರಮಹಂಸರು ಹೇಳುವ ಒಂದು ಕಥೆ. ಒಬ್ಬ ಹಾಲು ಮಾರುವ ಹೆಂಗಸು ಬ್ರಾಹ್ಮಣನೊಬ್ಬನ ಮನೆಗೆ ಹಾಲು ತರುತ್ತಿದ್ದಳು. ಅವಳು ದೂರದ ಹಳ್ಳಿಯಿಂದ ಬರಬೇಕಾಗಿತ್ತು. ಒಂದು

ದಿನ ಬರುವಾಗ ಹಿಂದಿನದಿನ ಮಳೆ ಬಂದಿತ್ತು. ಅವಕ್ಕಾಗಿ ದಾರಿಯಲ್ಲಿ ದಾಟುತ್ತಿದ್ದ ನದಿಯಲ್ಲಿ ಹೆಚ್ಚು ನೀರು ಇದ್ದುದರಿಂದ ದೋಣಿಗಾಗಿ ಕಾದು ಬರುವುದು ಹೊತ್ತಾಯಿತು. ಏಕೆ ಹೊತ್ತಾಯಿತೆಂದು ಬ್ರಾಹ್ಮಣ ಕೇಳುವಾಗ ದೋಣಿಗಾಗಿ ಕಾಯುತ್ತಾ ಹೊತ್ತಾಯಿತೆಂದಳು. ಬ್ರಾಹ್ಮಣ ಹಾಸ್ಯಕ್ಕಾಗಿ, ದೇವರ ಹೆಸರನ್ನು ಹೇಳಿ ಜನ ಭವಸಾಗರವನ್ನು ದಾಟುತ್ತಾರೆ, ನೀನು ಆ ಸಣ್ಣ ನದಿ ದಾಟಲು ಆಗಲಿಲ್ಲವೆ ಎಂದನು. ಈ ಹೆಂಗಸು ಅವನ್ನು ನಂಬಿ ಮಾರನೆ ದಿನ ಬರುವಾಗ ದೇವರ ಹೆಸರನ್ನು ಹೇಳುತ್ತಾ ನದಿಯಮೇಲೆ ನಡೆದುಕೊಂಡು ಬಂದಳು. ಬ್ರಾಹ್ಮಣ ಮಳೆ ಬಂದರೂ ಇಂದು ಎಂದಿನಂತೆ ಹೇಗೆ ಬೇಗ ಬಂದೆ ಎಂದು ವಿಚಾರಿಸಲಾಗಿ, ಆಕೆ ದೇವರ ಹೆಸರನ್ನು ಹೇಳಿ ನದಿಯಮೇಲೆ ನಡೆದುಕೊಂಡು ಬಂದೆ ಎಂದಳು. ಬ್ರಾಹ್ಮಣನಿಗೆ ನಂಬಿಕೆ ಬರಲಿಲ್ಲ. ಇಬ್ಬರೂ ನದಿಯ ಹತ್ತಿರ ಹೋದರು. ಆಕೆ ದೇವರ ಹೆಸರನ್ನು ಹೇಳುತ್ತಾ ನೀರಿನಮೇಲೆ ನಡೆದಳು. ಈತ ದೇವರ ಹೆಸರನ್ನು ಹೇಳುವನು, ಜೊತೆಗೆ ನೀರಿನಲ್ಲಿ ಇಳಿಯುತ್ತ ಬಟ್ಟೆ ಎಲ್ಲಿ ಒದ್ದೆಯಾಗುವುದೊ ಎಂದು ಮೇಲಕ್ಕೆ ಎತ್ತುತ್ತಿದ್ದನು. ಆಗ ಹೆಂಗಸು ನೀನು ದೇವರ ಹೆಸರನ್ನು ಬಾಯಿನಲ್ಲಿ ಹೇಳುವೆ, ಕೆಳಗೆ ಕೈಯಲ್ಲಿ ಬಟ್ಟೆಯನ್ನು ಎತ್ತುತ್ತಿರುವೆ. ದೇವರಲ್ಲಿ ನಿನಗೆ ನಂಬಿಕೆ ಇಲ್ಲ ಎಂದಳು.]

ನಾವು ಐದಾರು ವರುಷ ಅಲೆದಾಡಿ ನಂತರ ಕರ್ಮಕ್ಕೆ ಪ್ರಾರಂಭಿಸಿದೆವು. ಸ್ವಾಮಿ ವಿವೇಕಾನಂದರು ಒಂದು ದಿನ ನನ್ನನ್ನು ಕರೆದು “ಅಲೆದು ಪ್ರಯೋಜನವಿಲ್ಲ. ಭಗವಂತನಿಗಾಗಿ ಸೇವೆಮಾಡು” ಎಂದರು. ನಾವು ಎಷ್ಟೋ ಬಗೆಯ ಕೆಲಸಗಳನ್ನು ಮಾಡಿದೆವು. ಅದರಿಂದ ನಮಗೆ ಯಾವ ಪ್ರತಿಬಂಧಕವೂ ಆಗಲಿಲ್ಲ. ಅದರಿಂದ ಒಳ್ಳೆಯದೇ ಆಯಿತು. ಸ್ವಾಮಿ ವಿವೇಕಾನಂದರ ಮಾತಿನಲ್ಲಿ ನಮಗೆ ಅಷ್ಟು ಶ್ರದ್ಧೆ ಇತ್ತು. ಶ್ರೀರಾಮಕೃಷ್ಣ ಸ್ವಾಮಿ ವಿವೇಕಾನಂದ ಮತ್ತು ಅವರಿಗೆ ಸಂಬಂಧಪಟ್ಟ ಕೆಲಸಕ್ಕೆ ನಿಮ್ಮಲ್ಲಿ ತುಂಬಾ ಶ್ರದ್ಧೆ ಇರಬೇಕು. ಅಂಜಬೇಡಿ. ಶ್ರದ್ಧೆ ದೃಢವಾಗಿರಲಿ. ಎಷ್ಟೋ ಜನ ನಿಮ್ಮ ಶ್ರದ್ಧೆಯನ್ನು ಕೆಡಿಸಲು “ನೀನು ಮಾಡುತ್ತಿರುವ ಕೆಲಸಕ್ಕೂ ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದರಿಗೂ ಏನೂ ಸಂಬಂಧವಿಲ್ಲ”ವೆಂದು ಹೇಳುವರು. ಆದರೆ ಅದನ್ನು ಗಮನಿಸಬೇಡ. ಪ್ರಪಂಚವೇ ವಿರೋಧವಾಗಿ ನಿಂತರೂ ನೀನು ಒಂದುಸಲ ಸತ್ಯವೆಂದು ನಂಬುವುದನ್ನು ಎಂದಿಗೂ ತೊರೆಯಬೇಡ.

ಪ್ರಶ್ನೆ ; ಬರೀ ಆಧ್ಯಾತ್ಮಿಕ ಸಾಧನೆಯಲ್ಲೇ ಕಾಲಕಳೆಯುವುದು

ಬಹಳ ಕಷ್ಟ. ನಾನೂ ಯತ್ನ ಪಟ್ಟೆ. ಆದರೆ ಬಹಳ ದಿನ ಹೀಗೆ ಮಾಡಲು ಸಾಧ್ಯವಾಗಲಿಲ್ಲ.

ಸ್ವಾಮಿಜಿ : ಒಂದೆರಡುಸಲ ಸಾಧ್ಯವಾಗಲಿಲ್ಲವೆಂದರೆ ನಿಮ್ಮಿಂದ ಅದು ಆಗುವುದೇ ಇಲ್ಲವೆಂದು ಏಕೆ ಭಾವಿಸುತ್ತೀರಿ? ಒಬ್ಬನು ಮರಳಿ ಮರಳಿ ಯತ್ನಮಾಡಬೇಕು. ಶ್ರೀರಾಮಕೃಷ್ಣರು ಹೀಗೆ ಹೇಳುತ್ತಿದ್ದರು : "ಹೊಸದಾಗಿ ಹುಟ್ಟಿದ ಕರು ಎದ್ದು ನಿಲ್ಲಲು ಎಷ್ಟೋ ವೇಳೆ ಪ್ರಯತ್ನಿಸುವುದು, ಆದರೆ ಬೀಳುವುದು. ಆದರೆ ಬಿಡುವುದಿಲ್ಲ. ಪುನಃ ಪುನಃ ಪ್ರಯತ್ನ ಪಡುವುದು. ಕೊನೆಗೆ ನಿಲ್ಲಲು ಮಾತ್ರವಲ್ಲ ಜೊತೆಗೆ ಓಡುವುದನ್ನೂ ಕಲಿಯುವುದು." ಆಧ್ಯಾತ್ಮಿಕ ಜೀವನದ ಪ್ರಾರಂಭದಲ್ಲಿ ನಿರ್ದಿಷ್ಟ ಕೆಲಸವನ್ನು ತೆಗೆದುಕೊಂಡರೆ ಮನಸ್ಸಿಗೆ ಒಳ್ಳೆಯದು. ನಂತರ ಪಳಗಿದ ಮನಸ್ಸನ್ನು ಧ್ಯಾನ ಮತ್ತಿತರ ಸಾಧನೆಗಳಿಗೆ ಉಪಯೋಗಿಸಬಹುದು. ಚಂಚಲಸ್ವಭಾವದ ಮನಸ್ಸು ಧ್ಯಾನದ ಸಮಯದಲ್ಲಿಯೂ ಚಂಚಲವಾಗುವುದು.

ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದವರಿಗೆ ಕೇವಲ ಧ್ಯಾನ ಮತ್ತು ಪ್ರಾರ್ಥನೆಯಲ್ಲಿ ಕಾಲಕಳೆಯಬೇಕೆಂದು ಕೆಲವು ವೇಳೆ ಅನ್ನಿಸುವುದು. ಆ ಸಮಯದಲ್ಲಿ ಕರ್ಮ ಅವನಿಂದ ತಾನೆ ಜಾರುವುದು. ಆಧ್ಯಾತ್ಮಿಕ ಜಾಗೃತಿಯಾದಾಗ ಇದು ಸಾಧ್ಯ. ಇಲ್ಲದೆ ಇದ್ದರೆ ಕೇವಲ ತನ್ನ ಇಚ್ಛಾಬಲಾತ್ಕಾರದಿಂದ ಧ್ಯಾನ ಜೀವನಕ್ಕೆ ಪ್ರಯತ್ನಪಟ್ಟರೆ ಕೆಲವು ದಿನ ಮಾತ್ರ ಹಾಗೆ ಇರಲು ಸಾಧ್ಯ. ಅನಂತರ ಬೇಜಾರಾಗುವುದು. ಇದೇ ಸ್ಥಿತಿಯಲ್ಲಿ ಮುಂದುವರಿದರೆ ಕೆಲವರಿಗೆ ಹುಚ್ಚು ಹಿಡಿಯುವುದು. ಮತ್ತೆ ಕೆಲವರು ಹೀಗೆ ಸಾಧನೆಮಾಡಿ ಮನಸ್ಸನ್ನು ಹಲವಾರು ವಿಷಯಗಳಿಂದ ತುಂಬಿಕೊಳ್ಳುವರು.

ಬ್ರಹ್ಮಚರ್ಯದಿಂದ ತುಂಬಾ ಶಕ್ತಿಯನ್ನು ಗಳಿಸಬಹುದು. ನಿಜವಾದ ಬ್ರಹ್ಮಚಾರಿ ಇಪ್ಪತ್ತೈದು ಜನರ ಕೆಲಸವನ್ನು ಮಾಡಬಲ್ಲ. ಹಿಂದಿನ ಕಾಲದಲ್ಲಿ ಬ್ರಹ್ಮಚರ್ಯದ ಜೊತೆಗೆ ಜಪ, ಧ್ಯಾನ, ಅಧ್ಯಯನ, ಯಾತ್ರೆ, ಸಾಧುಸಂಗ ಇವನ್ನೂ ಹೇಳುತ್ತಿದ್ದರು.

ಎಲ್ಲರಿಗೂ ತಮಗೆ ಯಾವುದು ಒಳ್ಳೆಯದು ಎಂದು ಗೊತ್ತಾಗುವುದಿಲ್ಲ. ಅದಕ್ಕೇ ಸಾಧುಸಂಗ ಆವಶ್ಯಕ. ಇಲ್ಲಿ ನಾನು ನಿಮಗೆ ಸಂಪೂರ್ಣ ಸ್ವಾತಂತ್ರ್ಯ ಕೊಡುತ್ತೇನೆ. ನೋಡೋಣ, ಎಲ್ಲಿಯವರೆವಿಗೂ ನೀವು ಸರಿಯಾದ ಮಾರ್ಗದಲ್ಲಿ ನಡೆಯುತ್ತೀರಿ. ಜಾಸ್ತಿ ಏನೂ ಇಲ್ಲ,

ಕೆಲವು ದಿನಗಳಿಗಿಂತ ಹೆಚ್ಚು ಆಗುವುದಿಲ್ಲ.

ಮನಸ್ಸನ್ನು ನಾವು ಸರಿಯಾಗಿ ನಿಗ್ರಹಿಸಿಲ್ಲ. ಅದೇ ತೊಂದರೆಗೆಲ್ಲ ಕಾರಣ. ಕೆಲಸಕ್ಕೆ ಬಾರದ ಕಾಡು ಹರಟೆಗಿಂತ ದೊಡ್ಡ ಶತ್ರುವಿಲ್ಲ. ಅದು ಒಬ್ಬನನ್ನು ಸಂಪೂರ್ಣನಾಶಮಾಡುವುದು.

ಒಬ್ಬನು ಏಕಾಂತದಲ್ಲಿ ಸ್ವಲ್ಪಹೊತ್ತು ಕಾಲಕಳೆಯದೆ ಇದ್ದರೆ ತನ್ನ ಮನಸ್ಸಿನ ಸ್ವಭಾವ ಅವನಿಗೆ ಗೊತ್ತಾಗುವುದಿಲ್ಲ. ಸತ್ಯವನ್ನು ತಿಳಿಯ ಕೊಳ್ಳಲಾರ. ಗೊಂದಲ ಅವ್ಯವಸ್ಥೆಯ ಮಧ್ಯದಲ್ಲಿ ಆಧ್ಯಾತ್ಮಿಕ ಜೀವನ ದಲ್ಲಿ ಮುಂದುವರಿಯುವುದು ಬಹಳ ಕಷ್ಟ.

ನಾನು ಎಲ್ಲರಿಗೂ ಸ್ವಾತಂತ್ರ್ಯವನ್ನು ಕೊಡುತ್ತೇನೆ. ಪ್ರತಿ ಯೊಬ್ಬನೂ ತನ್ನದೇ ದಾರಿಯಲ್ಲಿ ಮುಂದುವರಿಯಲಿ ಎಂಬುದೇ ನನ್ನ ಇಚ್ಛೆ. ಹಾಗೆ ಮಾಡಲು ಅವನಿಗೆ ಸಾಧ್ಯವಿಲ್ಲದೇ ಇರುವಾಗ ಅವನ ಸಹಾಯಕ್ಕೆ ನಾನು ಬರುತ್ತೇನೆ.

ಯಾವುದಾದರೂ ಒಂದು ಸ್ಥಳದಲ್ಲಿ ನಿಂತು ಏನಾದರೂ ಕೆಲಸ ಮಾಡುವುದು ಒಳ್ಳೆಯದು. ಸಂಸ್ಥೆಯ ಉಪಯೋಗಕ್ಕೆ ಯಾವ ಕೆಲಸ ವನ್ನೂ ಮಾಡದೆ ಸುಮ್ಮನೇ ಒಂದು ಸ್ಥಳದಲ್ಲಿ ನಿಂತರೆ ನಿನಗೆ ಸಮಾಧಾನ ವಿರುವುದಿಲ್ಲ. ಯಾವುದಾದರೊಂದು ಬಗೆಯ ಕೆಲಸವನ್ನು ಮಾಡಿದರೆ ನಿಮ್ಮ ದೇಹ ಮನಸ್ಸು ಎರಡಕ್ಕೂ ಒಳ್ಳೆಯದಾಗುವುದು.

ನಾವು ತುಂಬಾ ಕೆಲಸಮಾಡುತ್ತಿದ್ದಾಗ ಮನಸ್ಸು ಉತ್ತಮ ಮಟ್ಟ ದಲ್ಲಿ ಇರುತ್ತಿತ್ತು. ನಾವು ಯಾವ ನಿಯಮಿತ ಕೆಲಸಮಾಡದೆ ಇರುವ ಈಗಿಗಿಂತಲೂ ಆಗ ಚೆನ್ನಾಗಿದ್ದೆವು ಎಂದು ಭಾವಿಸುತ್ತೇನೆ. ನನಗೆ ಏನು ಹೊಳೆಯುವುದೊ ಅಂತಹ ಆಂತರ್ಯದ ಭಾವನೆಯನ್ನು ಮಾತ್ರ ಹೇಳು ತ್ತಿರುವೆನು. ನಾನು ಈಗ ಕೆಲಸದಿಂದ ನಿವೃತ್ತನಾಗಿರುವೆನು. ನಾನು ಕೇವಲ ಉದಾಹರಣೆಗೆ ಮಾತ್ರ ನನ್ನನ್ನು ಕುರಿತು ಹೇಳುತ್ತಿರುವೆನು. ಕೆಲವರು ತಾವು ಕೂಡ ನನ್ನಂತೆ ಇರಬಹುದು; ಕೆಲಸ ಕಡಿಮೆಮಾಡ ಬಹುದು ಎಂದು ಭಾವಿಸಬಹುದು. ಆದರೆ ಹೀಗೆ ಎಂದಿಗೂ ಆಲೋಚನೆ ಮಾಡಬೇಡಿ.

ಅನಂತ ಜೀವನ ಮುಂದೆ ಇದೆ. ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದರಿಗಾಗಿ ಕೆಲವು ಜೀವನವನ್ನು ತೆತ್ತರೇನಂತೆ. ಇದೊಂದು ತಪ್ಪಾದರೂ ಕೆಲವು ಜೀವನಗಳನ್ನು ವ್ಯರ್ಥವಾಗಿ ಕಳೆಯೋಣ. ಆದರೆ ನಾನು ಹೇಳುತ್ತೇನೆ ಕೇಳಿ, ಇದು ಎಂದೆಂದಿಗೂ ವ್ಯರ್ಥವಾಗುವುದಿಲ್ಲ.

ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದರ ಅನುಗ್ರಹದಿಂದ ಎಂತಹ ಆಧ್ಯಾತ್ಮಿಕ ಅನುಭವ ನಿಮಗೆ ದೊರಕುವುದು ನೀವೇ ನೋಡುವಿರಿ.

ಇನ್ನು ಮೇಲೆ ಸೋಮಾರಿಯಾಗಬೇಡ. ಹಾಗೆ ಮಾಡಿದರೆ ಸರಿಯಾಗಿ ಜೀವನಮಾಡಲು ಸಾಧ್ಯವಾಗುವುದಿಲ್ಲ. ಯಾವ ಕೆಲಸವನ್ನು ನೀನು ತೆಗೆದುಕೊಂಡರೂ ನಿನ್ನ ಮನಸ್ಸನ್ನೆಲ್ಲ ಅದರಮೇಲೆ ಇಡು. ಸ್ವಾಮಿ ವಿವೇಕಾನಂದರು ಹೇಳುವಂತೆ ಇದೇ ಕರ್ಮರಹಸ್ಯ. ಕೆಲಸಕ್ಕೆ ಕೈಹಾಕು. ನೀನೀಗ ಒಂದು ಮಾಸಪತ್ರಿಕೆಯನ್ನು ನಡೆಸಬೇಕಾಗಿದೆ. ಅದನ್ನು ಸಾಂಗವಾಗಿ ನಡೆಸು. ನಿನಗೆ ಇದು ಬಹಳ ಕಷ್ಟವಲ್ಲ, ಬಹಳ ಸುಲಭ.

ಕರ್ಮಮಾಡುವುದಕ್ಕೆ ಮುಂಚೆ ಭಗವಂತನನ್ನು ಸ್ಮರಿಸಿ ಅವನಿಗೆ ನಮಸ್ಕರಿಸು. ಕೆಲಸಮಾಡುವಾಗಲೂ ಮಧ್ಯೆ ಮಧ್ಯೆ ಹಾಗೆ ಮಾಡು. ಕೆಲಸ ಪೂರೈಸಿದ ಮೇಲೆಯೂ ಹಾಗೆ ಮಾಡು. ನಿನ್ನ ಕಾಲವನ್ನೆಲ್ಲ ಸ್ವಾಮಿ ವಿವೇಕಾನಂದ ಶ್ರೀರಾಮಕೃಷ್ಣರ ಜೀವನ ಸಂದೇಶ ಮತ್ತು ಅವರು ನಮಗೆ ಕೊಟ್ಟಿರುವ ಸಲಹೆ ಇವನ್ನು ಸ್ಮರಿಸುವುದರಲ್ಲಿ ಕಳೆ. ನೀನು ಮಾಡುವ ಕೆಲಸವೆಲ್ಲ ಅವರಿಗಾಗಿ ಎಂಬ ಭಾವನೆ ನಿನ್ನ ಮನಸ್ಸಿನ ಅಂತರಾಳದಲ್ಲಿರಲಿ.

## ೬
## ಆನಂದ

ಸ್ವಾಮಿಜಿ: ನೀವೆಲ್ಲರೂ ಹೃತ್ಪೂರ್ವಕ ಭಗವಂತನಿಗೆ ನಿಮ್ಮನ್ನು ಅರ್ಪಿಸಿಕೊಳ್ಳಿ ಎಂದು ನಾನು ನಿಮಗೆ ಏತಕ್ಕೆ ಅಷ್ಟು ಆಸಕ್ತಿಯಿಂದ ಹೇಳುತ್ತೇನೆ ಗೊತ್ತೆ? ನಾವು ನಿಮ್ಮ ವಯಸ್ಸಿನಲ್ಲಿದ್ದಾಗ ಶ್ರೀರಾಮಕೃಷ್ಣರು ಸಾಧನೆ ಮಾಡುವಂತೆ ನಮ್ಮನ್ನು ಬಲಾತ್ಕರಿಸುತ್ತಿದ್ದರು. ಬಾಲ್ಯದಲ್ಲಿ ಮನಸ್ಸು ಜೇಡಿಯ ಮಣ್ಣಿನಂತೆ ಮೃದುವಾಗಿರುವುದು. ಯಾವ ವಸ್ತುವಿನ ಸಂಪರ್ಕವನ್ನು ಅದು ಹೊಂದುತ್ತದೆಯೊ ಅದರ ಅಚ್ಚಳಿಯದ ನೆನಪು ಮನಸ್ಸಿನಲ್ಲಿರುವುದು. ಎಲ್ಲಿಯವರಿವಿಗೂ ಜೇಡಿಯಮಣ್ಣು ಮೃದುವಾಗಿರುವುದೋ ಅಲ್ಲಿಯವರೆಗೆ ನಮಗೆ ಬೇಕಾದ ಆಕಾರವನ್ನು ಅದಕ್ಕೆ ಕೊಡಬಹುದು. ಮಣ್ಣನ್ನು ಸುಟ್ಟಮೇಲೆ ಅದು ಸಾಧ್ಯವಿಲ್ಲ. ನಿಮ್ಮ ಮನಸ್ಸು ಇನ್ನೂ ಸುಡದ ಮಣ್ಣಿನಂತೆ ಇದೆ. ನಿಮಗೆ ತೋರಿದ ರೀತಿಯಲ್ಲಿ ಅದಕ್ಕೆ ಆಕಾರವನ್ನು ಕೊಡಬಹುದು. ಅದು ಇನ್ನೂ ಶುದ್ಧವಾಗಿರುವುದು. ಯಾವ ಕೊಳೆಯೂ ತಾಕಿಲ್ಲ. ಬಹಳ ಸುಲಭವಾಗಿ ಭಗವಂತನ ಕಡೆಗೆ

ಇದನ್ನು ತಿರುಗಿಸಬಹುದು. ಈಗಿನಿಂದ ಮನಸ್ಸನ್ನು ಭಗವದಾಲೋಚನೆ ಯಲ್ಲೇ ನಿಲ್ಲಿಸಿದರೆ ಬೇರಾವ ಆಲೋಚನೆಯೂ ಇದಕ್ಕೆ ಭಂಗತಾರದು. ಈಗ ಮನಸ್ಸನ್ನು ಭಗವಂತನಮೇಲೆ ದೃಢವಾಗಿ ನಿಲ್ಲಿಸಿದರೆ ಆಧ್ಯಾತ್ಮಿಕ ವಿಕಾಸದ ವಿಷಯವಾಗಿ ನಿಮಗೆ ಯಾವ ಅಂಜಿಕೆಯೂ ಇಲ್ಲ.

ಮನಸ್ಸು ಸಾಸಿವೆಕಾಳಿನ ಒಂದು ಪೊಟ್ಟಣದಂತೆ. ಒಂದುಸಾರಿ ಅವು ಚದುರಿದರೆ ಅದನ್ನು ಒಟ್ಟುಗೂಡಿಸುವುದು ಕಷ್ಟ. ಅದಕ್ಕೇ ಮನಸ್ಸು ಚಂಚಲವಾಗುವುದಕ್ಕೆ ಮುಂಚೆ ಏಕಾಗ್ರಮಾಡಿ ಎಂದು ನಾನು ನಿಮಗೆ ಹೇಳುವುದು. ನಿಮಗೆ ವಯಸ್ಸಾಗಿ ಮಾನಸಿಕ ಶಕ್ತಿಯೆಲ್ಲ ಚದುರಿಹೋದ ಮೇಲೆ ಪುನಃ ಅದನ್ನು ಏಕಾಗ್ರಮಾಡಬೇಕಾದರೆ ಬಹಳ ಕಷ್ಟಪಡಬೇಕು. ಆಗ ಮನಸ್ಸನ್ನು ಯಾವುದಾದರೊಂದು ವಸ್ತುವಿನಮೇಲೆ ನಿಲ್ಲಿಸಬೇಕಾದರೆ ಅದ್ಭುತಶ್ರಮಪಡಬೇಕು. ಸಣ್ಣ ಮಕ್ಕಳ ಮನಸ್ಸಿನಮೇಲೆ ಎಷ್ಟು ಬೇಗ ಪರಿಣಾಮವನ್ನುಂಟುಮಾಡಬಹುದು ಎಂಬುದನ್ನು ನೀವು ಗಮನಿಸಿಲ್ಲವೆ? ನೀನೂ ಅವರಂತೆ. ನೀವೂ ನಿಮ್ಮ ಜೀವನವನ್ನು ತಿದ್ದಿಕೊಳ್ಳಬೇಕಾದರೆ ನಿಮ್ಮ ಹದಿನಾರನೆಯ ವಯಸ್ಸಿನಿಂದ ಮೂವತ್ತನೆಯ ವಯಸ್ಸಿನವರೆಗೆ ಪ್ರಯತ್ನಪಡಿ. ಅನಂತರ ಆತ್ಮಸಾಕ್ಷಾತ್ಕಾರವನ್ನು ಪಡೆಯುವ ಸಂಭವ ಕಡಿಮೆ. ಮೂವತ್ತು ವರುಷದವರೆಗೆ ದೇಹ ಮತ್ತು ಮನಸ್ಸು ಶುದ್ಧ ವಾಗಿರುವುದು. ಮನಸ್ಸಿಗೆ ಒಂದು ಆಕಾರವನ್ನು ಕೊಡುವ ಸಮಯ ಅದು. ನಿಮ್ಮ ಜೀವನದ ಗುರಿಯನ್ನು ಸಾಧಿಸಲು ಹೃತ್ಪೂರ್ವಕ ಯತ್ನಿಸಬೇಕು. ಯೌವನಕಾಲದಲ್ಲಿ ಮನಸ್ಸಿನಮೇಲೆ ಯಾವ ಒಂದು ಪ್ರಭಾವವಿರುವುದೋ ಅದೇ ಜೀವನವೆಲ್ಲ ಇರುವುದು. ಭಗವಂತನ ಸಾಕ್ಷಾತ್ಕಾರಕ್ಕಾಗಿ ಶುದ್ಧ ಜೀವನವನ್ನು ನಡೆಸಬೇಕೆಂದು ನೀನು ಸಂಕಲ್ಪಿಸಿದ್ದರೆ ಇಂದಿನಿಂದಲೇ ನಿನ್ನ ಕೈಲಾದುದನ್ನೆಲ್ಲಾ ಮಾಡು. ಈಗ ನಿನ್ನ ಆರೋಗ್ಯ ಚೆನ್ನಾಗಿದೆ. ಮನಸ್ಸು ಮೃದುವಾಗಿದೆ. ಸಾಧನೆಗೆ ಇದೇ ಯೋಗ್ಯ ಸಮಯ. ಸತತ ಪ್ರಯತ್ನದಿಂದ ನಿನ್ನ ಮನಸ್ಸಿಗೆ ಒಂದು ಆಕಾರವನ್ನು ಕೊಡು. ನೀನು ಈ ಸಮಯವನ್ನು ಕಳೆದುಕೊಂಡರೆ ನಂತರ ಏನು ಮಾಡಬೇಕಾದರೂ ಕಷ್ಟ.

ಈ ಸಮಯದಲ್ಲಿ ನೀನು ಮನಸ್ಸಿನಮೇಲೆ ಎಂದೂ ಮಾಸದ ಒಂದು ಪ್ರಭಾವವನ್ನು ಬೀರಿಗರೆ ಭಗವಂತನನ್ನೇ ನಿನ್ನ ಜೀವನದ ಚರಮ ಗುರಿಯನ್ನಾಗಿ ಮಾಡಿಕೊಂಡರೆ, ಅವನ ಸಾಕ್ಷಾತ್ಕಾರಕ್ಕೇ ನಿನ್ನ ಬಾಳನ್ನು ಮುಡಿಪಾಗಿ ಇಟ್ಟರೆ, ಎಲ್ಲಾ ದುಃಖ ಸಂಕಟಗಳಿಂದಲೂ ಪಾರಾಗುವೆ. ಯಾವ ದುಃಖವಾಗಲೀ, ಸಂಕಟವಾಗಲೀ, ನಿನ್ನ ಸಮತ್ವಕ್ಕೆ ಭಂಗತರ ಲಾರದು. ಶಾಶ್ವತ ಸಚ್ಚಿದಾನಂದಕ್ಕೆ ನೀನು ಹಕ್ಕುದಾರನಾಗುವೆ.

ಮನುಷ್ಯನಿಗೆ ಏನುಬೇಕು? ಅವನಿಗೆ ಸುಖ ಬೇಕು. ಹೇಗೆ ಅದರ ಹಿಂದೆ ಓಡುವನು! ಎಷ್ಟೆಷ್ಟು ಹಂಚಿಕೆಯನ್ನು ಅದಕ್ಕಾಗಿ ಮಾಡುವನು! ಅದಕ್ಕಾಗಿ ಎಷ್ಟೆಷ್ಟು ಕಷ್ಟಪಡುವನು! ಆದರೆ ಅದು ದೊರಕುತ್ತದೆಯೆ! ಎಷ್ಟು ಹಂಚಿಕೆ ವ್ಯಯವಾದಮೇಲೆ ನಿರಾಶನಾಗುವನು. ಪುನಃಪುನಃ ಹಂಚಿಕೆಮಾಡುವನು. ಆದರೆ ಪ್ರಯೋಜನವಿಲ್ಲ. ಹೀಗೆಯೆ ಅವನ ಬಾಳೆಲ್ಲ ಕಳೆಯುವುದು. ಶಾಂತಿಸುಖವನ್ನು ಅನುಭವಿಸುವ ಅದೃಷ್ಟವೇ ಅವನ ಪಾಲಿಗೆ ಇಲ್ಲ. ಸಾಧಾರಣ ಕೂಲಿಯವನಂತೆ ಕಷ್ಟಪಟ್ಟು ದುಡಿಯುವನು. ಅದಕ್ಕೆ ಬದಲು ಇವನಿಗೆ ಸಿಕ್ಕುವುದೇ ದುಃಖ ಮತ್ತು ಯಾತನೆ. ನಂತರ ಪ್ರಪಂಚವನ್ನು ತೊರೆಯುವನು. ಹೀಗೆ ಅವನು ವೃಥಾ ಹುಟ್ಟಿ ಸಾಯುವನು. ಜೀವನದ ಗುರಿಯನ್ನು ಮರೆತು ಕೆಲಸಕ್ಕೆ ಬಾರದ ಸುಖದ ಹಿಂದೆ ಓಡುವವನಿಗೆ ಇವಕ್ಕಿಂತ ಮೇಲಾದುದನ್ನು ನಿರೀಕ್ಷಿಸಲು ಅಸಾಧ್ಯ.

ನಿಜವಾದ ಆನಂದ ನಿನಗೆ ಬೇಕಾಗಿದ್ದರೆ ಪ್ರಪಂಚದ ಭೋಗ ಮತ್ತು ತೋರಿ ಮಾಯವಾಗುವ ಕ್ಷಣಿಕ ಸುಖದ ಮೇಲಿರುವ ಆಸಕ್ತಿ ಇವನ್ನು ತೊರೆದು, ನಿನ್ನ ಮನಸ್ಸನ್ನೆಲ್ಲಾ ಭಗವಂತನ ಕಡೆಗೆ ತಿರುಗಿಸ ಬೇಕು. ಆತನಿಗೆ ಅಭಿಮುಖವಾಗಿ ಹೋದಷ್ಟು ನಿನಗೆ ಬರುವ ಆನಂದವೂ ಹೆಚ್ಚುವುದು. ಪ್ರಪಂಚ ಮತ್ತು ಅದರ ಭೋಗ್ಯವಸ್ತುಗಳಿಗೆ ಆಸಕ್ತನಾದಷ್ಟೂ ಹೆಚ್ಚು ದುಃಖಪಡಬೇಕಾಗುವುದು.

ಸಾಧಾರಣ ಮನುಷ್ಯನ ಸ್ವಭಾವ ಗೊತ್ತೆ? ಅವನಿಗೆ ಬೇಕಾಗಿರುವುದು ಸುಖ, ಸಂತೋಷ. ಕಷ್ಟ ಮರೆಯುವುದಕ್ಕೆ ಒಂದು ದಾರಿ ಬೇಕು. ಮೊದಲಿನಿಂದಲೂ ಅವನು ಈ ತಪ್ಪನ್ನು ಮಾಡುವನು. ಸುಖವನ್ನು ಹುಡುಕುವ ಶೇಕಡ ತೊಂಭತ್ತೊಂಭತ್ತು ಜನರಿಗೆ ಅದೇನೆಂಬುದೇ ಗೊತ್ತಿಲ್ಲ. ತಮಗೆ ಸಮೀಪದಲ್ಲಿ ಏನು ದೊರಕುವುದೋ ಅದನ್ನು ಹಿಡಿದುಕೊಂಡು ಸುಖ ಸಿಕ್ಕಿದೆ ಎಂದು ಭ್ರಾಂತಿಪಡುವರು. ಇದರಿಂದ ನಿರಾಶರಾದಾಗ ಬೇರೊಂದನ್ನು ತೆಗೆದುಕೊಳ್ಳುವರು. ಪುನಃ ಹಾಗೆಯೇ ಆದರೆ ತಮ್ಮ ದುರದೃಷ್ಟವನ್ನು ಹಳಿಯುವರು. ಆದರೆ ಮೌಢ್ಯತೆಯನ್ನು ನೋಡಿ! ಪುನಃಪುನಃ ನಿರಾಶೆ ಎದುರಿಸುವುದು. ಆದರೆ ಆ ದಾರಿ ಬಿಡಲೊಲ್ಲರು. ಸರಿಯಾದ ದಾರಿಯನ್ನು ಅನುಸರಿಸಲೊಲ್ಲರು!

ಒಂದಾದಮೇಲೊಂದು ಪೆಟ್ಟನ್ನು ತಿನ್ನುತ್ತ ತಮ್ಮ ಗ್ರಹಚಾರವನ್ನು ದೂರಿಕೊಂಡು ಕಾಲಯಾಪನೆ ಮಾಡುವರು. ಶ್ರೀರಾಮಕೃಷ್ಣರು ಅವರನ್ನು

ಒಂದು ಒಂಟೆಗೆ ಹೋಲಿಸುತ್ತಿದ್ದರು. ಹತ್ತಿರ ಇರುವಾಗಲೂ ಅದು ಒಳ್ಳೆಯ ಹುಲ್ಲನ್ನು ತಿನ್ನುವುದಿಲ್ಲ. ಮುಳ್ಳು ಇರುವ ಒಂದು ಬಗೆಯ ಹುಲ್ಲನ್ನು ತಿಂದರೆ ರಕ್ತ ಬರುವುದೆಂದು ಗೊತ್ತಿದ್ದರೂ ಅದನ್ನೇ ತಿನ್ನು ವುದು. ಇದರಂತೆಯೇ ನಾವು ಕೆಟ್ಟ ಆಲೋಚನೆ ಮತ್ತು ಕರ್ಮದಿಂದ ದುಃಖಪಡುತ್ತೇವೆ.

ನೀವೆಲ್ಲಾ ಹುಡುಗರು, ಇನ್ನೂ ಸಣ್ಣವರು. ಪ್ರಪಂಚದ ಯಾವ ಪಾಪಮುದ್ರೆಯೂ ನಿಮ್ಮ ಮನಸ್ಸಿನಮೇಲೆ ಬಿದ್ದಿಲ್ಲ. ಈಗಲಿಂದ ನೀವು ಸಾಧನೆಮಾಡಿದರೆ ಜೀವನದ ದುಃಖದಿಂದ ಪಾರಾಗಬಹುದು.

ನಿಮಗೆ ಎಷ್ಟೇ ಐಶ್ವರ್ಯವಿರಲಿ, ನೀವು ಎಷ್ಟೇ ಸುಖದಿಂದ ಶ್ರೀಮಂತ ರಾಗಿ ಜೀವಿಸುವುದಕ್ಕೆ ಸಾಧ್ಯವಾಗಲಿ, ನಿಮ್ಮ ಹಿತಚಿಂತಕರು ಮತ್ತು ಬಳಗ ಎಷ್ಟೇ ವಿಸ್ತಾರವಾಗಿರಲಿ, ನಿಮಗೆ ನಿಜವಾದ ಸಂತೋಷ ದೊರಕದು. ಇವೆಲ್ಲ ಕ್ಷಣಿಕ. ಹೆಚ್ಚೆಂದರೆ ಒಂದು ಗಂಟೆ ಇಷ್ಟೆ. ನಂತರ ದುಃಖದ ಪ್ರತಿಕ್ರಿಯೆ ಬರುವುದು. ಕರ್ಮಕ್ಕೆ ತಕ್ಕ ಫಲ ಬರುವುದು. ನಾವು ನಿಜ ವಾದ ಶಾಶ್ವತ ಆನಂದವನ್ನು ಬಯಸಿದರೆ ದುಃಖದ ಪ್ರತಿಕ್ರಿಯೆ ಬರದ ಸುಖವನ್ನು ಹುಡುಕಬೇಕು. ಈ ನಿಜ ಶಾಶ್ವತ ಆನಂದ ಎಲ್ಲಿರುವುದು? ಅದು ಭಗವಂತನ ಸಾಕ್ಷಾತ್ಕಾರದಲ್ಲಿದೆ. ಈ ಭಗವದಾನಂದ ಒಂದರಿಂದಲೇ ದುಃಖದ ಪ್ರತಿಕ್ರಿಯೆ ಬರುವುದಿಲ್ಲ. ನಿಮಗೆ ಗೊತ್ತಿರುವ ಎಲ್ಲಾ ಬಗೆಯ ಸುಖದಿಂದಲೂ ದುಃಖವೇ ಪರಿಣಾಮ. ಎಲ್ಲಿ ಪ್ರತಿಕ್ರಿಯೆ ಇದೆಯೋ ಅಲ್ಲೆಲ್ಲಾ ದುಃಖ, ಯಾತನೆ.

ಮಾನವ ಜೀವನದ ಗುರಿಯನ್ನು ಎಂದಿಗೂ ಮರೆಯಬೇಡ. ಮೃಗ ದಂತೆ ತಿಂದು, ಕುಡಿದು, ನಿದ್ರಿಸಿ ಕೆಲಸಕ್ಕೆ ಬಾರದ ಹರಟೆ ಹೊಡೆಯುವು ದಕ್ಕೇನು ದೇವರು ನಮಗೆ ಈ ಜೀವನವನ್ನು ಕೊಟ್ಟಿರುವುದು? ಮನುಷ್ಯ ನಾಗಿ ಹುಟ್ಟಿದಮೇಲೆ ಪ್ರಾಪಂಚಿಕ ಭೋಗವನ್ನೇ ನಿಕೃಷ್ಟದೃಷ್ಟಿಯಿಂದ ನೋಡು. ಭಗವಂತನ ಸಾಕ್ಷಾತ್ಕಾರ ಪಡೆದು ಅನಂತಾನಂದವನ್ನು ಹೊಂದಲು ದೃಢಸಂಕಲ್ಪಮಾಡು. ಪ್ರಯತ್ನದಲ್ಲಿ ಸಾವನ್ನೆದುರಿಸಿದರೂ ವಿಮುಖನಾಗಬೇಡ.

ಶ್ರೀರಾಮಕೃಷ್ಣರ ಹೆಸರಿನಲ್ಲಿ ಮನೆ ನೆಂಟರಿಷ್ಟರೆಲ್ಲರನ್ನೂ ಏತಕ್ಕೆ ತೊರೆದು ಬಂದೆ? ಅವನನ್ನು ಪಡೆದು ಜಗದ ದುಃಖದಿಂದ ಪಾರಾಗಿ ಶಾಶ್ವತ ಆನಂದ ಮತ್ತು ಶಾಂತಿಯನ್ನು ಪಡೆಯುವುದಕ್ಕೆ ಅಲ್ಲವೆ?

ಜೀವನದ ಗುರಿಯನ್ನು ಸಾಧಿಸಲು ದೇಹ ಮತ್ತು ಮನಸ್ಸಿನಲ್ಲಿ ಶಕ್ತಿ

ಇರುವವರೆಗೂ ನಿಸ್ಪೃಹನಾಗಿ ಹೋರಾಡು. ನಂತರ ಅದನ್ನು ಪಡೆಯು ವೆನು, ಏನೋ ಭಗವಂತನ ದಯೆಯಿಂದ ಮಾತ್ರ ಅದು ಸಾಧ್ಯವೆನ್ನುತ್ತಾ ಎಂದಿಗೂ ನಿನ್ನ ಪ್ರಯತ್ನವನ್ನು ತಗ್ಗಿಸಬೇಡ. ಸೋಮಾರಿಗಳು ಮಾತ್ರ ಹೀಗೆ ಮಾತನಾಡುವರು. ನೀವು ವೃಥಾ ಕಾಲವನ್ನು ವ್ಯರ್ಥಮಾಡು ವುದು ನನಗೆ ಆಗದು. ನಿಮಗೆ ಇಚ್ಛೆಯಿಲ್ಲದೇಇದ್ದರೆ ಸ್ಪಷ್ಟ ವಾಗಿ "ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆ ನನ್ನಲ್ಲಿದೆ. ಸತ್ಯಸಾಕ್ಷಾತ್ಕಾರಕ್ಕೆ ಭಗವಂತನನ್ನು ಪಡೆಯಲು ನಿಜವಾದ ಆಸಕ್ತಿ ಇಲ್ಲ" ಎಂದು ಹೇಳಿ. ನಿಮ್ಮ ಮಾತು ನಡತೆ ಒಂದೇ ಆಗಲಿ.

ನೀವು ಸಾಧನೆಯನ್ನು ಮಾಡುವುದು ಯಾವಾಗ? ಜೀವನದ ಅತಿ ಶ್ರೇಷ್ಠಸಮಯವೆ, ನಾನು ಹೇಳಿದಂತೆ ಹದಿನಾರರಿಂದ ಮೂವತ್ತು ವರುಷದವರೆಗೆ. ಇಂತಹ ಪವಿತ್ರಸಮಯವನ್ನು ಕೆಲಸಕ್ಕೆ ಬಾರದ ವಸ್ತು ಗಳನ್ನು ಪಡೆಯುವುದಕ್ಕೆ ಯತ್ನಿಸಿದಮೇಲೆ ವೃದ್ಧಾಪ್ಯದಲ್ಲಿ ಸಾಧನೆ ಮಾಡುವಿರಿ ಎಂದು ತಿಳಿದಿರೇನು? ಇದು ಮೋಸ, ಭ್ರಾಂತಿ. ನಿಮ್ಮನ್ನು ನೀವೇ ಮೋಸಗೊಳಿಸಿಕೊಳ್ಳಬೇಡಿ.

೭

## ಪ್ರಾಪಂಚಿಕರು ಮತ್ತು ಆಧ್ಯಾತ್ಮಿಕ ಜೀವನ.

ಸ್ವಾಮಿಜಿ: ಅನೇಕರು ಕೆಲಸಕ್ಕೆ ಬಾರದ ವಿಷಯಗಳಮೇಲೆ ಕಾಲ ಕಳೆದು, ವಯಸ್ಸಾದಮೇಲೆ, ಕೆಲಸದಲ್ಲಿದ್ದರೆ ನಿವೃತ್ತರಾದಮೇಲೆ, ಯಾವು ದಾದರೂ ತೀರ್ಥಯಾತ್ರೆಯಲ್ಲಿ ಕಾಲಕಳೆಯುವರು. ಇದರಿಂದ ಅವರಿಗೆ ಭಕ್ತಿ, ಮುಕ್ತಿ ಲಭಿಸುವುದೆಂದು ತಿಳಿಯುವರು. ಅದೂ ಅಲ್ಲದೆ ಆ ಪವಿತ್ರ ಸ್ಥಳದ ತೀರ್ಥ ತಾವು ಮಾಡಿದ ಪಾಪವನ್ನೆಲ್ಲ ನಾಶಮಾಡುವುದೆಂದು ಭಾವಿಸುವರು. ಹೀಗೆ ಆಲೋಚಿಸುವುದು ಬರೀ ಹುಚ್ಚಲ್ಲದೆ ಮತ್ತೇನು? ತೀರ್ಥ ನಮ್ಮನ್ನು ಪವಿತ್ರಮಾಡುವುದು ಎಂದು ದೃಢವಾಗಿ ನಂಬುವವರಿ ಗೇನೋ ಅದರಿಂದ ನಿಸ್ಸಂದೇಹವಾಗಿ ಸ್ವಲ್ಪ ಸಹಾಯವಾಗಬಹುದು. ತೀರ್ಥ ಯಾವಾಗಲೂ ಪರಿಶುದ್ಧ, ಪಾವನವಾದುದು. ಯಾರಿಗೆ ಒಳ್ಳೆಯ ಸಂಸ್ಕಾರಗಳಿವೆಯೊ ಅವರಿಗೆ ಇದರಿಂದ ಸ್ವಲ್ಪ ಒಳ್ಳೆಯದೇನೊ ಆಗು ವುದು. ಇದಕ್ಕಿಂತ ಹೆಚ್ಚು ಏನೂ ಇಲ್ಲ. ಕಾಶಿ ಇದಕ್ಕೆ (exception) ವಿನಾಯಿತಿ ಎಂತಲೇ ಹೇಳಬಹುದು. ಅದಕ್ಕೇ ಅನೇಕರು ಕಾಶಿಯಲ್ಲಿ ತಮ್ಮ ಜೀವನದ ಕೊನೆಗಾಲವನ್ನು ಕಳೆಯಲು ಕಾತುರರಾಗಿರುವರು. ಆ ಪವಿತ್ರಸ್ಥಳದಲ್ಲಿ ಮರಣ ಪಡೆದರೆ ಮುಕ್ತಿ ದೊರಕುವುದೆಂದು ದೃಢವಾಗಿ

ನಂಬುವರು. ಕಾಶಿಯಲ್ಲಿ ಮರಣ ಪಡೆದರೆ ಸಂಸಾರದಿಂದ ಬಿಡುಗಡೆ ಯಾಗುವನೆಂಬುದೇನೋ ನಿಜ. ವಿಶ್ವನಾಥನ ರೀತಿ ವಿಚಿತ್ರ. ನಮಗೆ ಅದು ಗೊತ್ತಾಗುವುದಿಲ್ಲ.

ದುಃಖದಲ್ಲಿ ನರಳಿ ಮುಕ್ತಿಯನ್ನು ಪಡೆಯಬೇಕೆ? ಸಾಧನೆ ಮತ್ತು ಭಕ್ತಿಯ ಆನಂದದಿಂದ ಈ ಜೀವನವನ್ನು ಕಳೆದು ಕೊನೆಗಾಲಕ್ಕೆ ಅನಂತಾ ನಂದವನ್ನು ಪಡೆಯುವುದು ಲೇಸಲ್ಲವೇ? ಶ್ರೀರಾಮಕೃಷ್ಣರು ಹೇಳುವಂತೆ ಮನೆಗೆ ನೀವು ಮುಂದಿನ ಬಾಗಿಲಿನಿಂದಲೂ ಪ್ರವೇಶಿಸಬಹುದು, ಹಿಂದಿನ ಬಾಗಿಲಿನಿಂದಲೂ ಪ್ರವೇಶಿಸಬಹುದು. ಆದರೆ ಇದರಲ್ಲಿ ಯಾವುದು ಮೇಲು? ಮುಂದಿನ ಬಾಗಿಲಿನ ಮೂಲಕ ಪ್ರವೇಶಮಾಡುವುದಕ್ಕೆ ಸಾಧ್ಯ ವಾಗುವಾಗ ಹಿಂದಿನ ಬಾಗಿಲಿನಿಂದ ಏತಕ್ಕೆ ಹೋಗಬೇಕು? ಇದರಲ್ಲಿ ಯಾವುದು ಬೇಕು ನಿಮಗೆ ಆರಿಸಿಕೊಳ್ಳಿ—ತಾತ್ಕಾಲಿಕ ಸುಖ ಬೇಕೆ? ಅನಂತಾನಂದ ಬೇಕೆ? ಈ ಜೀವನದ ಸುಖ ಬೇಕೆ? ಅಥವಾ ಜೀವನಾತೀತ ಸುಖ ಬೇಕೆ?

ನೀವೆಲ್ಲಾ ಇನ್ನೂ ಸಣ್ಣ ಹುಡುಗರು, ಸಾಧುಸ್ವಭಾವದವರು, ನಿಷ್ಕ ಪಟಿಗಳು. ನಿಮ್ಮ ಮನಸ್ಸಿನಮೇಲೆ ಪ್ರಪಂಚ ಇನ್ನೂ ತನ್ನ ಪ್ರಭಾವ ವನ್ನು ಬೀರಿಲ್ಲ. ಈಗ ನೀನು ಪ್ರಯತ್ನಪಟ್ಟರೆ ಪ್ರಪಂಚದ ಶೋಕ ಮೋಹಗಳಿಂದ ಪಾರಾಗಬಹುದು. ಈಗಲೇ ನಿಮ್ಮ ಆದರ್ಶವನ್ನು ದೃಢಪಡಿಸಿಕೊಳ್ಳಿ. ಈಗ ಅದನ್ನು ನಿಶ್ಚಯಿಸದೇ ಇದ್ದರೆ ಮುಂದೆ ಎಂದಿಗೂ ಅದನ್ನು ನಿಶ್ಚಯಿಸುವುದಕ್ಕೇ ಆಗುವುದಿಲ್ಲ. ಸುಮ್ಮನೇ ಮೇಲೆ ತೇಲಿದರೆ ಪ್ರಯೋಜನವಿಲ್ಲ. ನಿಮ್ಮ ಆದರ್ಶವನ್ನು ಎಂದಿಗೂ ಬಿಡ ಬೇಡಿ. ಯಾರು ದೇವರು ತಮ್ಮ ಜೀವನದ ಸರ್ವಸ್ವವೆಂದು ಒಪ್ಪಿಕೊಂಡಿ ರುವರೋ, ಪ್ರಾಪಂಚಿಕ ಸುಖಭೋಗಗಳ ಮೇಲಿನ ಆಸೆಯನ್ನೆಲ್ಲ ಯಾರು ತೊರೆದಿರುವರೊ ಅವರಿಗೆ ದೇವರು ಬಹಳ ಸಮೀಪ. ಅಂತಹ ಭಕ್ತರು ಯಶೋದೆ ಮತ್ತು ಗೋಪಿಯರು ಗೋಪಾಲನನ್ನು ಕಟ್ಟಿಹಾಕಿ ದಂತೆ ಭಕ್ತಿಯಿಂದ ಭಗವಂತನನ್ನು ಕಟ್ಟಿಹಾಕುವರು.

ದೇವರಿಗೋಸುಗ ಯಾರು ತಮ್ಮ ಸರ್ವಸ್ವವನ್ನೂ ತೊರೆದಿರುವರೋ ಅವನಿಗೆ ದೇವರಮೇಲೆ ದೊಡ್ಡ ಹಕ್ಕಿದೆ ಎಂದು ಶ್ರೀರಾಮಕೃಷ್ಣರು ಹೇಳು ತ್ತಿದ್ದರು. ಒಬ್ಬ ತನ್ನ ತಾಯಿತಂದೆಯರನ್ನು ಅಥವಾ ಹತ್ತಿರದ ನೆಂಟ ರನ್ನು ಪ್ರೀತಿಯಿಂದ ತನಗೆ ಏನುಬೇಕೋ ಅದನ್ನು ಕೇಳುವಂತೆ ಭಕ್ತ ಭಗವಂತನನ್ನು ಕೇಳುವುದಕ್ಕೆ ಹಕ್ಕಿದೆ. "ದೇವರೆ, ಪ್ರತ್ಯಕ್ಷವಾಗು, ನೀನು

ಬರುವುದಿಲ್ಲವೇ? ನೀನು ಬರಲೇಬೇಕು." ಭಕ್ತ ಹೃತ್ಪೂರ್ವಕ ಆಶಿಸಿದರೆ ದೇವರು ಸುಮ್ಮನೆ ಇರುವುದಕ್ಕೆ ಆಗುವುದಿಲ್ಲ. ಅವನ ಸವಿಾಪಕ್ಕೆ ಓಡಿ ಅವನನ್ನು ತನ್ನ ತೊಡೆಯಮೇಲೆ ಕರೆದುಕೊಳ್ಳುವನು. ಓ! ಎಷ್ಟು ಅವರ್ಣನೀಯ ಆ ಆನಂದ! ಆ ಆನಂದಕ್ಕೆ ಪಾರವೆಲ್ಲಿದೆ! ಯಾರಿಗೆ ಈ ಅನುಭವವಾಗಿರುವುದೋ ಅವನಿಗೆ ಮಾತ್ರ ಇದು ವೇದ್ಯ. ಇದರೊಂದಿಗೆ ಹೋಲಿಸಿದರೆ ಅನೇಕರಿಗೆ ಅಷ್ಟು ಹಿತವಾಗಿರುವ ಪ್ರಾಪಂಚಿಕ ಸುಖ ಕೆಲಸಕ್ಕೆ ಬಾರದಾಗುತ್ತದೆ, ಸಪ್ಪೆಯಾಗುವುದು.

ಯಾರು ಭಗವಂತನಿಗಾಗಿ ಪ್ರಾಪಂಚಿಕ ಸುಖವನ್ನು ತೊರೆದಿರುವರೊ ಆತ ಆಗಲೆ ತನ್ನ ಗುರಿಯ ಮುಕ್ಕಾಲುಪಾಲು ದಾರಿಯನ್ನು ಸೇರಿರುವನು ಎನ್ನುತ್ತಿದ್ದರು ಶ್ರೀರಾಮಕೃಷ್ಣರು. ಪ್ರಾಪಂಚಿಕ ಸುಖವನ್ನೆಲ್ಲ ತೊರೆಯುವುದಕ್ಕೆ ಸಾಧ್ಯವೆ? ಭಗವಂತನ ದಯೆ ಇದ್ದು, ಜೀವಿಯೂ ಬಹಳ ತಪಸ್ಸನ್ನು ಮಾಡಿದ್ದರೆ, ತ್ಯಾಗಮಾಡುವುದಕ್ಕೆ ಶಕ್ತಿ ಲಭಿಸುವುದು. ಮನಸ್ಸಿನಲ್ಲಿ ಹೀನ ಆಲೋಚನೆಗಳೇ ಬರದಂತೆ ಪರಿಶುದ್ಧಮಾಡಿ.

ನೀವೆಲ್ಲ ಬ್ರಹ್ಮಚಾರಿಗಳು. ನೀವು ಮದುವೆಯಾಗುವುದಿಲ್ಲ. ಭಗವಂತನಿಗಾಗಿ ನಿಮ್ಮ ಸುಖಭೋಗಗಳನ್ನೆಲ್ಲ ಅರ್ಪಿಸಿರುವಿರಿ. ಪರಿಶುದ್ಧವಾದ ಕಳಂಕರಹಿತವಾದ ಜೀವನವನ್ನು ನಡೆಸುವುದು ಬಹಳ ಕಷ್ಟವೆಂಬುದನ್ನು ನೆನಪಿನಲ್ಲಿಡಿ. ನಿಮ್ಮಂತಹ ಹುಡುಗರು ಭಾವಿಸುವಷ್ಟು ಸುಲಭವಲ್ಲ. ಅದು ಹೇಗಿದೆ ಗೊತ್ತಿದೆಯೆ? ಅದು ಹರಿದ ಕತ್ತಿಯ ಅಲಗಿನಮೇಲೆ ನಡೆದಂತೆ ಪ್ರತಿ ಕ್ಷಣದಲ್ಲಿಯೂ ಜಾರಿ ಚೂರುಚೂರು ಆಗುವ ಸಂಭವವಿದೆ. ಈ ಜೀವನದಲ್ಲಿ ಗೆಲ್ಲಬೇಕಾದರೆ ಪೂರ್ಣ ಬ್ರಹ್ಮಚರ್ಯವಿದ್ದರೆ ಮಾತ್ರ ಸಾಧ್ಯ. ಭಗವಂತನಮೇಲೆ ಭಕ್ತಿಶ್ರದ್ಧೆಗಳಿಲ್ಲದೇ ಇದ್ದರೆ ಪರಿಶುದ್ಧ ಜೀವನವನ್ನು ನಡೆಸಲು ಕಷ್ಟ, ಇಲ್ಲ ಸಾಧ್ಯವೇ ಇಲ್ಲ. ಕಾಮಲೋಭಗಳಿಂದ ಕೂಡಿದ ಪ್ರಪಂಚದಲ್ಲಿ ಬಾಳಬೇಕಾಗಿದೆ. ಪ್ರತಿದಿನವೂ ಶೇಕಡ ತೊಂಭತೊಂಭತ್ತು ಮಂದಿ ವಿಷಯವಸ್ತುಗಳಿಗೆ ಹುಚ್ಚರಾಗಿ ಹೋಗುತ್ತಿರುವುದನ್ನು ನೋಡುತ್ತಿರುವಿರಿ. ಇದರಿಂದ ನಿನ್ನ ಮನಸ್ಸು ಮಾಸಿಹೋದರೆ ನಿನಗೆ ಭರವಸೆಯೇ ಇಲ್ಲ.

ಬ್ರಹ್ಮಚರ್ಯ ಜೀವನವನ್ನು ಯಾರು ನಡೆಸಬೇಕೆಂದು ಬಯಸುವರೋ ಅವರು ತಮ್ಮ ಮನಸ್ಸನ್ನು ಯಾವಾಗಲೂ ಒಳ್ಳೆಯ ಆಲೋಚನೆ, ವ್ಯಾಸಂಗ, ಉತ್ತಮ ವಿಷಯಗಳನ್ನು ಚರ್ಚಿಸುವುದರಲ್ಲಿ ನಿರತವಾಗುವಂತೆ ಮಾಡಬೇಕು. ಅವರು ತಮ್ಮ ಕಾಲವನ್ನು ದೇವರಪೂಜೆ, ಸಾಧುಸೇವೆ,

ಸಾಧುಸಹವಾಸ, ಧ್ಯಾನ, ಜಪ ಮುಂತಾದುವುಗಳಲ್ಲಿ ಕಳೆಯಬೇಕು. ನಮ್ಮ ಶೀಲವನ್ನು ತಿದ್ದುವುದಕ್ಕೆ ಇದೊಂದೇ ಮಾರ್ಗ.

ಮೊದಲು ಬ್ರಹ್ಮಚರ್ಯವ್ರತ ಪರಿಪಾಲನೆಯಲ್ಲಿ ದೃಢವಾಗಿರಿ. ನಂತರ ಎಲ್ಲಾ ಬರುವುದು. ಸಾಧನೆಯಿಲ್ಲದೆ ಬ್ರಹ್ಮಚರ್ಯವ್ರತ, ಸಫಲವಾಗುವುದಿಲ್ಲ. ಪೂರ್ಣಬ್ರಹ್ಮಚರ್ಯವಿಲ್ಲದೆ ಭಗವಂತನ ಸಾಕ್ಷಾತ್ಕಾರ ಸಾಧ್ಯವಿಲ್ಲ. ಭಗವಂತನ ಸಾಕ್ಷಾತ್ಕಾರವಿಲ್ಲದೆ ನಿಜವಾದ ಆನಂದವಿಲ್ಲ. ನಿಜವಾದ ಆನಂದವಿಲ್ಲದೇ ಇದ್ದರೆ ಮನುಷ್ಯಜೀವನ ವ್ಯರ್ಥ. ನೀವೆಲ್ಲಾ ಇನ್ನೂ ಹುಡುಗರು. ಶುದ್ಧಮನಸ್ಸು, ಉಚ್ಚಧ್ಯೇಯಗಳಿವೆ. ನನ್ನ ಪ್ರಿಯಮಕ್ಕಳೆ, ಕೇಳಿಕೊಳ್ಳುತ್ತೇನೆ, ಸ್ವಲ್ಪ ಸಾಧನೆ ಮಾಡಿ. ಭಕ್ತಿ, ಶ್ರದ್ಧೆ ನಿಮ್ಮಲ್ಲಿ ಹೇಗೆ ಉದ್ದೀಪನವಾಗುವುದೆಂಬುದನ್ನು ನೋಡುವಿರಿ. ಶಾಶ್ವತ ಆನಂದಕ್ಕೆ ಹಕ್ಕುದಾರರಾಗುವಿರಿ. ನಿಮಗೆ ಇಷ್ಟದೇವರ ದರ್ಶನ, ಭಗವಂತನ ದರ್ಶನ ಲಭಿಸುವುದು. ಆಗ ನಿಮ್ಮ ಜೀವನದ ಚರಮಗುರಿಯನ್ನು ಮುಟ್ಟುವಿರಿ.

೮

## ಶರಣಾಗತಿಯ ಮೂಲಕ ಸಾಕ್ಷಾತ್ಕಾರ.

ಸ್ವಾಮಿಜಿ: ಮೂರುಬಗೆ ತೀವ್ರ ಪ್ರೇಮವಿದ್ದರೆ ದೇವರನ್ನು ಪಡೆಯಬಹುದೆಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅದೇ ಪತಿವ್ರತೆಗೆ ಪತಿಯಲ್ಲಿರುವ ಭಕ್ತಿ, ಪ್ರಾಪಂಚಿಕನಿಗೆ ವಿಷಯವಸ್ತುಗಳಲ್ಲಿ ಇರುವ ಆಸಕ್ತಿ, ಜಿಪುಣನಿಗೆ ದ್ರವ್ಯದಮೇಲೆ ಇರುವ ಆಸಕ್ತಿ. ಇಂತಹ ತೀವ್ರ ವ್ಯಾಕುಲತೆಯಿಂದ ದೇವರನ್ನು ಬೇಗ ಪಡೆಯಬಹುದು. ಹೀಗೆಂದರೆ ಅರ್ಥವೇನು ಗೊತ್ತೆ? ಮನಸ್ಸಿನ ಆಸೆಯೆಲ್ಲ ನಾಶವಾಗಿ ಭಗವಂತನನ್ನು ಪಡೆಯಬೇಕೆಂಬ ತವಕದಿಂದ ತುಂಬಿತುಳುಕಾಡುತ್ತಿದ್ದರೆ, ಭಗವಂತನನ್ನು ಸೇರಬಹುದು. ಅವನ ದರ್ಶನ ಮತ್ತು ಅನುಗ್ರಹವನ್ನು ಪಡೆಯಬಹುದು. ಶ್ರೀಕೃಷ್ಣ ಗೀತೆಯಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ" ಎಲ್ಲಾ ಸ್ವಪ್ರಯತ್ನವನ್ನೂ ಬದಿಗೊತ್ತಿ ನನ್ನಲ್ಲಿ ಮಾತ್ರ ಶರಣಾಗು ಎನ್ನುವನು.

ಆತ್ಮಾರ್ಪಣೆ, ಆತ್ಮಾರ್ಪಣೆ, ಆತ್ಮಾರ್ಪಣೆಗೆ ಇದೇ ದಾರಿ. ಬೇರೆ ದಾರಿಯೇ ಇಲ್ಲ. ಕಲಿಯುಗದಲ್ಲಿ ಮನುಷ್ಯನ ಪ್ರಾಣ ಅನ್ನದಮೇಲೆ ಇರುವುದು ಅವನ ಆಯುಸ್ಸು ಅಲ್ಪ. ಈ ಅಲ್ಪಾವಕಾಶದಲ್ಲಿ ಅವನು ಎಷ್ಟೋ ಮಾಡಬೇಕಾಗಿದೆ. ಭಗವಂತನ ಸಾಕ್ಷಾತ್ಕಾರಕ್ಕೆ ಬೇಕಾಗುವ

ಶಕ್ತಿ, ತ್ಯಾಗ, ಧೈರ್ಯ, ತಪಸ್ಸು ಇರುವುದು ಬಹಳ ಕಡಿಮೆ. ಅವನ ಮನಸ್ಸು ದುರ್ಬಲ. ಸ್ವಾಭಾವಿಕವಾಗಿ ಭೋಗವಸ್ತುಗಳನ್ನು ಹುಡುಕಿ ಕೊಂಡುಹೋಗುವುದು. ಆದರೂ ದೇವರನ್ನು ಕಾಣಬೇಕಾಗಿದೆ. ಭಗವಂತನ ಸಾಕ್ಷಾತ್ಕಾರವಿಲ್ಲದೇ ಇದ್ದರೆ ಅವನ ಬಾಳು ವ್ಯರ್ಥ. ಯಾವ ಸಾರ್ಥಕ ವಾದುದನ್ನೂ ಸಾಧಿಸದೆ ಮನುಷ್ಯ ಜಗತ್ತಿಗೆ ಬರುವನು ಹೋಗುವನು. ದೇವರನ್ನು ಮಾನವ ಪಡೆಯಬೇಕು. ಆತ್ಮಾರ್ಪಣೆಗಿಂತ ಸುಲಭ ಮಾರ್ಗವಿಲ್ಲ.

ಆತ್ಮಾರ್ಪಣೆ ಎಂದರೆ ಏನು? ನಾವು ಏನನ್ನೂ ಮಾಡಬೇಕಾಗಿಲ್ಲ; ತೆಪ್ಪಗೆ ಕುಳಿತುಕೊಂಡಿರುವುದು ಎಂತಲೆ? ಇಲ್ಲ—ಇದಲ್ಲ ಅರ್ಥ. ಭಕ್ತ ಶುದ್ಧ ಹೃದಯದಿಂದ ಯಾವಾಗಲೂ ಹೀಗೆ ಪ್ರಾರ್ಥಿಸಬೇಕು: "ಹೇ ದೇವ! ನನಗೆ ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು ತಿಳಿಯದು. ನಾನು ನಿನ್ನಲ್ಲೇ ಆಶ್ರಯಿಸಿಕೊಂಡಿರುವೆನು. ನನ್ನ ಆಧ್ಯಾತ್ಮಿಕಜೀವನಕ್ಕೆ ಬೇಕಾ ದುದೆಲ್ಲವನ್ನೂ ಅನುಗ್ರಹಿಸು. ಯಾವ ಮಾರ್ಗದಲ್ಲಿ ಹೋದರೆ ಸುಲಭ ವಾಗುವುದೊ ಆ ಮಾರ್ಗದಲ್ಲಿ ನನ್ನನ್ನು ಕರೆದೊಯ್ಯಿ. ನಿನ್ನನ್ನು ಅನವರತ ಧ್ಯಾನಮಾಡುವ, ಮನನಮಾಡುವ ಶ್ರದ್ಧೆ ಮತ್ತು ಶಕ್ತಿಯನ್ನು ಕರುಣಿಸು."

ಭಗವಂತನಿಗೆ ತನ್ನ ತನುಮನಗಳನ್ನು ಅರ್ಪಿಸುವುದು ಅಷ್ಟು ಸುಲಭ ವಲ್ಲ. ಹಲವರು ಭಗವಂತನಲ್ಲಿ ಶರಣಾಗಿರುವೆನು; ನನ್ನ ಸರ್ವಸ್ವವನ್ನೂ ಅವನಿಗೆ ಅರ್ಪಿಸುವೆನು, ಆತ ನನ್ನನ್ನು ಪ್ರೇರೇಪಿಸಿದಂತೆ ಅನುಸರಿಸು ತ್ತಿರುವೆನು ಎನ್ನುವರು. ಆದರೆ ಅವರ ಜೀವನವನ್ನು ನೋಡಿದರೆ ಅವರ ಮಾತು ಮತ್ತು ನಡತೆಗೆ ಸಂಬಂಧವೇ ಇರುವುದಿಲ್ಲ. ಏನಾದರೂ ಒಳ್ಳೆ ಯದನ್ನು ಅವರು ಮಾಡಿದರೆ ಅದಕ್ಕೆ ಕೀರ್ತಿ ತೆಗೆದುಕೊಳ್ಳುವರು. ತುಂಬಾ ಆನಂದಪಡುವರು. "ಓ! ನಾನು ಎಂತಹ ಮಹತ್ಕಾರ್ಯವನ್ನು ಸಾಧಿಸಿರುವೆನು" ಎಂದು ಆಲೋಚಿಸುವರು. ಆದರೆ ಸ್ವಲ್ಪ ತೊಂದರೆ ಬಂದರೂ ತಪ್ಪನ್ನೆಲ್ಲಾ ದೇವರಮೇಲೆ ಹಾಕಿ "ಎಂತಹ ದುರದೃಷ್ಟವನ್ನು ಅವನು ನನಗೆ ಕೊಡುತ್ತಿರುವನು" ಎನ್ನುವರು. ಹಲವರು ಜೀವನ ಕಳೆ ಯುವುದು ಹೀಗೆ.

ಹೊರಗಿನಿಂದ ಮಾತ್ರ ನಾವು ಮನುಷ್ಯರನ್ನು ಅಳೆಯುತ್ತೇವೆ. ಆದರೆ ದೇವರು ಅಂತರಂಗವನ್ನು ನೋಡುವನು. ಯಾರು ಹೃತ್ಪೂರ್ವಕ ಪ್ರಾರ್ಥಿಸುವರೋ ದೇವರು ಅವರ ಬಳಿಗೆ ಓಡುವನು. ಇದನ್ನು ಸತ್ಯ ವೆಂದು ತಿಳಿ. ಶುದ್ಧಹೃದಯದವನಾಗು. ನಿನ್ನ ಮಾತು ಮತ್ತು ಮನಸ್ಸು

ಬೇರೆಯಾಗದಿರಲಿ. ಭಗವಂತ ನಿನ್ನ ಕೋರಿಕೆಯನ್ನು ಈಡೇರಿಸುವನು. "ನಾನು ಮಾಡಿದ ಸಾಧನೆಯ ಹದಿನಾರನೇ ಒಂದು ಪಾಲನ್ನು ನೀನು ಮಾಡಿದರೆ ಸಾಕು" ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅವರು ಸಾಧನೆಯನ್ನು ನಮಗೆ ಬಹಳ ಸುಲಭಮಾಡಿರುವರು. ಆದರೆ ನಾವು ಸೋಮಾರಿಗಳು. ನಮ್ಮ ಪಾಲಿನ ಕರ್ತವ್ಯಮಾಡುವುದಿಲ್ಲ. ಇದರಿಂದ ನಮಗೆ ನಾವೇ ಮೋಸಮಾಡಿಕೊಳ್ಳುವೆವು. ಯಾರಾದರೂ ನಮಗೆ ರುಚಿ ಕರವಾದ ಆಹಾರವನ್ನು ಕೊಟ್ಟರೆ ಅವರೇ ನಮ್ಮ ಬಾಯಿಗೂ ಇಡ ಬೇಕೆಂದು ಬಯಸುವೆವು. ಹಲವರು ಆಶೀರ್ವದಿಸಿ ಎಂದು ನನ್ನನ್ನು ಕೇಳುವರು. ಇದನ್ನು ಕೇಳಿದಾಗ ನಾನು ನಗದೇ ಇರಲಾರೆ. ನಾನು ಹೇಳಿದಂತೆ ಅವರು ಮಾಡುವುದಿಲ್ಲ. ನಾನು ಮರೆಯಾದೊಡನೆಯೆ ತಮ್ಮ ಮನಸ್ಸಿಗೆ ತೋರಿದುದನ್ನು ಮಾಡುವರು. ನಾನು ಹೇಳಿದಂತೆ ಮಾಡುತ್ತಿರುವಿರಾ ಎಂದು ಯಾರನ್ನಾದರೂ ಕೇಳಿದರೆ "ಇಲ್ಲ, ಸ್ವಾಮಿಜಿ, ನನಗೆ ಸಾಧ್ಯವೇ ಇಲ್ಲ" ಅಥವಾ "ನಾನು ದುರ್ಬಲ ಅಥವಾ ಪಾಪಿ ಯಾದುದರಿಂದ ಮಾಡಲು ಆಗಲಿಲ್ಲ" ಎನ್ನುವರು. ನನ್ನಲ್ಲಿ ಯಾರಿಗೆ ಶ್ರದ್ಧೆ ಇಲ್ಲವೊ ನಾನು ಹೇಳಿದಂತೆ ಯಾರು ಮಾಡಲಾರರೋ ಅವರು ನನ್ನನ್ನು ಕೇಳದೆ ತಮಗೆ ತೋರಿದುದನ್ನು ಮಾಡಬಹುದು. ನಾನು ಹೇಳಿದಂತೆ ಮಾಡುವುದಿಲ್ಲ. ಆದರೂ ನಾನು ಅವರನ್ನು ಹರಸಬೇಕಂತೆ. ಸರಿಯಾಗಿ ಪ್ರಯತ್ನಪಡದೆ ಸುಮ್ಮನೆ ಕಾಲಕಳೆಯುತ್ತಾ ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಪಡೆಯಲು ಇಚ್ಛಿಸುವರು. ಅಂತಹವರು ಬಂದರೆ ಸುಮ್ಮನೆ ಹರಟೆ ಹಾಸ್ಯದಲ್ಲಿ ಕಾಲಕಳೆಯುವೆನು. ಹೇಳಿದಂತೆ ಅನುಷ್ಠಾನ ಮಾಡದ ಜನರಿಗೆ ಆಧ್ಯಾತ್ಮಿಕ ವಿಷಯಗಳನ್ನು ಬೋಧಿಸಿ ಫಲವೇನು? ಯಾರು ನಾನು ಹೇಳಿದುದನ್ನು ಆಚರಿಸಬಲ್ಲರೆಂದು ನನಗೆ ತೋರುವುದೊ ಅಂತಹ ಕೆಲವರಿಗೆ ಮಾತ್ರ ಆಧ್ಯಾತ್ಮಿಕ ವಿಷಯಗಳನ್ನು ಹೇಳುತ್ತೇನೆ. ಆದರೂ ನಾನು ಹೇಳಿದುದನ್ನೆಲ್ಲ ಪೂರ್ತಿ ಅನುಸರಿಸುವುದಿಲ್ಲ. ಯಾವಾಗಲೂ ಸೋಮಾರಿಯ ಸ್ವಭಾವದವರಾಗಿ ಪ್ರಯತ್ನಪಡದೆ ಎಲ್ಲ ವನ್ನೂ ಪಡೆಯಬೇಕೆಂದು ಬಯಸುವರು.

ಭಗವಂತನ ದಯೆಗೆ ಅಭಾವವಿಲ್ಲ. ಆದರೆ ಜನ ಇದನ್ನು ಉಪ ಯೋಗಿಸಿಕೊಳ್ಳುವುದಿಲ್ಲ ಅಷ್ಟೆ. ಇದೇ ಬಂದಿರುವ ತೊಂದರೆ. ಸುಮ್ಮನೇ ಹರಟೆಹೊಡೆಯುವುದಕ್ಕೆ ಆಸೆ ಅವರಿಗೆ. ಸತ್ಯಸಾಕ್ಷಾತ್ಕಾರಕ್ಕೆ ಯಾರಿಗೂ ಆಸೆ ಇಲ್ಲ. ಕೆಲಸಕ್ಕೆ ಬಾರದ ವಿಷಯಗಳನ್ನು ಮಾತನಾಡುವುದೇ

ಅವನಿಗೆ ಒಂದು ಹೆಮ್ಮೆ. ಅವನು ಕಾಲವನ್ನು ಕಳೆಯುವುದು ಹೀಗೆ. ಅವನು ಬಿತ್ತಿದಂತೆ ಫಲ ಅನುಭವಿಸುವನು. ಸಾವಿರದಂತೆ ಗುರುಗಳು ದೊರಕುವರು. ಆದರೆ ಒಳ್ಳೇ ಶಿಷ್ಯ ಸಿಕ್ಕುವುದೇ ಅಪರೂಪ. ಗುರು ಪಾತ್ರಕ್ಕೆ ಹಲವರು ಅಣಿಯಾಗಿರುವರು. ಆದರೆ ಅವರ ಸಂದೇಶವನ್ನು ಕೇಳಿ ಅನುಸರಿಸುವವರೆಲ್ಲಿ? ಗುರುವಚನದಲ್ಲಿ ಶ್ರದ್ಧೆಯಿಟ್ಟು ಕಷ್ಟಪಟ್ಟು ಸಾಧನೆಮಾಡಿದರೆ ಅವನ ದುಃಖ ಕೊನೆಗಂಡಂತೆಯೆ. ಯಾರಿಗೆ ಅಂತಹ ಶ್ರದ್ಧೆ ಇದೆಯೊ ಅವರು ಚಂಚಲರಾಗಿ ಅಲ್ಲಿ ಇಲ್ಲಿ ಒದ್ದಾಡಬೇಕಾಗಿಲ್ಲ. ದೇವರೇ ಅವನ ಇಚ್ಛೆಯನ್ನು ನೆರವೇರಿಸುವನು. ದೇವರೇ ಅವನ ಕೈಹಿಡಿದು ಸನ್ಮಾರ್ಗದಲ್ಲಿ ನಡೆಸುವನು. ಭಗವಂತನ ಅನುಗ್ರಹ ಪಡೆದವನು ಕಾತುರನಾಗಬೇಕಾಗಿಲ್ಲ.

ಎಷ್ಟೋ ಕೋಟಿಗೆ, ಒಬ್ಬ, ಸದಾಶಯ, ಸದ್ಭಾವನೆಯನ್ನು ಆಲೋಚಿಸುವನು. ಇಂತಹ ಅದೃಷ್ಟವಂತರಲ್ಲಿ ಕೊನೆಯವರೆವಿಗೂ ಇದನ್ನು ಬಿಡದವರು ಬಹಳ ವಿರಳ. ಯಾರ ಹೃದಯದಲ್ಲಿ ಒಳ್ಳೆ ಭಾವನೆ ಜನಿಸಿದೆಯೊ ಅವರು ಆ ಭಾವನೆಯನ್ನು ವೃದ್ಧಿಗೊಳಿಸಿ ಬಲಪಡಿಸುವುದಕ್ಕೆ ಪ್ರಯತ್ನಪಡಬೇಕು. ತಮ್ಮ ಆಕಾಂಕ್ಷೆಯನ್ನು ಅದೇ ತೀವ್ರಸ್ಥಿತಿಯಲ್ಲಿ ಇಟ್ಟುಕೊಳ್ಳುವುದಕ್ಕಾಗಿ ಭಗವಂತನಿಗೆ, "ಹೇ ಪ್ರಭು! ನಿನ್ನ ದಯೆಯನ್ನು ಅನುಗ್ರಹಿಸು. ಅನವರತವೂ ಅದು ನನ್ನಮೇಲಿರಲಿ" ಎಂದು ಪ್ರಾರ್ಥಿಸಬೇಕು. ಮನೆಯಲ್ಲಿ ಕೆಲಸಮಾಡುವವಳು ತನ್ನ ಯಜಮಾನಿಗೆ ಸೇರಿದ ಮನೆ ತನ್ನದೇ ಎಂದು ಭಾವಿಸುವಳು. ಆದರೆ ತನ್ನ ಮನಸ್ಸಿನಲ್ಲಿ ಇದು ತನ್ನ ಮನೆಯಲ್ಲವೆನ್ನುವುದು ಗೊತ್ತಿದೆ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ನಾವು ಬದುಕಿರುವವರೆಗೆ ಅನಾಸಕ್ತಿಯಿಂದ ಕೆಲಸಮಾಡಬೇಕು. ಈ ಪ್ರಪಂಚ ನಮ್ಮ ನಿಜವಾದ ಸ್ಥಳವಲ್ಲ. ಇದೊಂದು ಕೆಲವುದಿನ ತಂಗಿಹೋಗುವ ತಾತ್ಕಾಲಿಕ ಸ್ಥಳವೆಂಬ ಭಾವನೆ ನಮ್ಮ ಮನಸ್ಸಿನ ಅಂತರಾಳದಲ್ಲಿರಬೇಕು. ನಮ್ಮ ಮನಸ್ಸನ್ನೆಲ್ಲಾ ನಾವು ಎಲ್ಲಿಂದ ಬಂದೆವೋ ಅಂತಹ ಪರಂಧಾಮದಲ್ಲಿರುವ ಭಗವಂತನೆಡೆಗೆ ತಿರುಗಿಸಬೇಕು.

ಎಷ್ಟು ಜನಕ್ಕೆ ದೇವರು, ಸತ್ಯ, ಬೇಕು? ಅಹಂಕಾರದಿಂದ ಉನ್ಮತ್ತನಾಗಿ ಕೆಲವುವೇಳೆ ದೇವರೇ ಇಲ್ಲವೆಂದೂ ಹರಟುತ್ತಾನೆ. ಪ್ರತಿಯೊಬ್ಬನೂ ತಾನೇ ಸರಿ, ತನ್ನದೇ ಮುಕ್ತಿಗೆ ಸರಿಯಾದ ಮಾರ್ಗವೆಂದೂ ಹರಟುತ್ತಾನೆ. ಅಂತಹ ಮನುಷ್ಯ ಏನು ಹೇಳುತ್ತಾನೆ ಗೊತ್ತೆ? "ನಮಗೆ

ಏನು ತಿಳಿಯುವುದಿಲ್ಲವೊ ಅದನ್ನು ನಾವು ಒಪ್ಪುವುದಿಲ್ಲ." ತನ್ನ ತಿಳು ವಳಿಕೆ ಎಷ್ಟು ಅಲ್ಪ ಎನ್ನುವುದು ಅವನಿಗೆ ಗೊತ್ತಾಗುವುದೇ ಇಲ್ಲ. ಯಾವುದನ್ನು ಸರಿ ಎಂದು ಇಂದು ಒಪ್ಪಿಕೊಂಡಿರುವನೊ ಅದನ್ನೇ ನಾಳೆ ಸುಳ್ಳು ಎಂದು ಆಚೆಗೆ ನೂಕುವನು. ದಿನದಿನಕ್ಕೆ ಅವನ ಅಭಿಪ್ರಾಯ ಬದಲಾಯಿಸುವುದು. ತನ್ನ ಪಾಂಡಿತ್ಯವನ್ನು ತೋರಿಸಿಕೊಳ್ಳುವುದಕ್ಕಾಗಿ ಯಾವುದು ಭವ್ಯವೊ, ಉದಾತ್ತವೊ ಅದನ್ನು ಗಮನಿಸುವುದೇ ಇಲ್ಲ. ಮಾನವ ಎಷ್ಟು ವಿಧದಲ್ಲಿ ಭ್ರಾಂತನಾಗಿರುವನೊ ಅದು ಮಹಾಮಾಯೆಗೇ ಗೊತ್ತು.

ಪ್ರತಿಯೊಬ್ಬನೂ ತನ್ನ ಯೋಗ್ಯತೆಗೆ ತಕ್ಕಂತೆ ದೇವರನ್ನು ಭಾವಿಸು ವನು. ನಮ್ಮ ಭಾವನೆ ಅಷ್ಟು ಕ್ಷುದ್ರವಾಗಿರಬಾರದು. ಭಗವಂತ ಸರ್ವಜ್ಞ. ಅವನು ನಮ್ಮ ಮನಸ್ಸು ಬುದ್ಧಿಗೆ ನಿಲುಕುವುದಿಲ್ಲ. ಯಾರಿಗೆ ಭಗವಂತ ತನ್ನ ಕೃಪೆಯನ್ನು ತೋರುವನೊ ಅವನು ಮಾತ್ರ ದೇವರನ್ನು ತಿಳಿದು ಕೊಳ್ಳಬಲ್ಲ. ಅವನ ಸಾಕ್ಷಾತ್ಕಾರವಾದಮೇಲೆ ಜ್ಞಾನದ್ವಾರ ತೆರೆಯು ವುದು. ಹೃದಯಗ್ರಂಥಿ ಸಡಿಲವಾಗುವುದು. ಪ್ರಾಜ್ಞನಾಗುವನು. ಈ ಸ್ಥಿತಿ ಒಬ್ಬನಿಗೆ ಪ್ರಾಪ್ತವಾದಾಗ ಮಾತ್ರ ತನಗೂ ದೇವರಿಗೂ ಇರುವ ಸಂಬಂಧ ಗೊತ್ತಾಗುವುದು. ತಾನು ಭಗವಂತನಿಗೆ ಸೇರಿದವನು ಎಂಬುದು ಅರಿವಾಗುವುದು.

ಜಗನ್ಮಾತೆ ಕೃಪೆ ತೋರುವವರೆಗೆ ಮನುಷ್ಯನಿಗೆ ಜ್ಞಾನಪ್ರಾಪ್ತಿ ಯಾಗುವುದಿಲ್ಲ. ಅವಳೇ ಕೃಪೆದೋರಿ ಈ ಪ್ರಪಂಚ ಮತ್ತು ಇತರ ಪ್ರಪಂಚದ ರಹಸ್ಯವನ್ನು ತೋರಿದಾಗ ಮಾತ್ರ ಗೊತ್ತಾಗುವುದು. ನಾವು ಸಾಧಾರಣವಾಗಿ ತಿಳಿದುಕೊಳ್ಳುವ ಬುದ್ಧಿ ನಿಜವಾದ ಬುದ್ಧಿಯಲ್ಲ. ಅದರ ಪರಿಮಿತಿ ತುಂಬಾ ಕಿರಿದು. ಈ ಜೀವನದಲ್ಲಿ ಯಾರಿಗೆ ನಿಜವಾದ ಆನಂದ ವನ್ನು ಪಡೆಯಬೇಕೆಂದು ಇಚ್ಛೆ ಇದೆ? "ನಾನಾರು? ಏತಕ್ಕೆ ಬಂದೆ? ನಾನೇತಕ್ಕೆ ಇಷ್ಟು ದುಃಖದಿಂದ ನರಳುವುದು? ಒಬ್ಬ ಮಹಾತ್ಮನ ಸ್ಥಿತಿಗೆ ಏರುತ್ತಾನೆ. ಮತ್ತೊಬ್ಬ ಮೂರ್ಖನಾಗಿ ಇರುತ್ತಾನೆ, ಏತಕ್ಕೆ?" ಇಂತಹ ಜಟಿಲಸಮಸ್ಯೆಯನ್ನು ಬಗೆಹರಿಸಬೇಕಾದರೆ ಅವರಿಗೆ ಇರುವ ಮಾರ್ಗ ಒಂದೇ ಒಂದು. ಅದೇ, ತಮಗೆ ಸಾಧ್ಯವಾದ ರೀತಿಯಲ್ಲಿ ಭಗವಂತನನ್ನು ನೋಡಲು ಪ್ರಯತ್ನಿಸುವುದು. ಭಗವಂತನನ್ನು ಸಾಕ್ಷಾ ತ್ಕಾರಮಾಡಿಕೊಂಡ ತಕ್ಷಣವೇ ಜೀವನದ ಜಟಿಲಸಮಸ್ಯೆ ಬಗೆಹರಿಯು ವುದು.

ಮಕ್ಕಳಿಗೆ ಕಂಬವನ್ನು ಬಿಗಿಯಾಗಿ ಹಿಡಿದುಕೊಂಡು ಸುತ್ತಲು ಆಸೆ. ಅವರ ಲಕ್ಷ್ಯವೆಲ್ಲಿದೆ ಗೊತ್ತೆ? ಅದು ಕಂಬದ ಮೇಲಿದೆ. ಕಂಬದ ಮೇಲೆ ಇರುವ ಕೈಯನ್ನು ಸಡಿಲ ಮಾಡಿದರೆ ಕೆಳಗೆ ಬಿದ್ದು ಗಾಯಮಾಡಿ ಕೊಳ್ಳಬೇಕಾಗುವುದೆಂದು ಗೊತ್ತಿದೆ. ಮೊದಲು ಜೀವನದ ಆಧಾರವಾದ ಕಂಬವನ್ನು ಹಿಡಿದುಕೊಳ್ಳಿ. ನಂತರ ಎಷ್ಟುಸಲ ಬೇಕಾದರೂ ಸುತ್ತಿ. ಬೀಳುವ ಭಯವಿರುವುದಿಲ್ಲ. ನಮ್ಮ ಆದ್ಯಕರ್ತವ್ಯ ಭಗವಂತನ ಸಾಕ್ಷಾತ್ಕಾರ. ಅವನೇ ಕಂಬ. ನೀವು ಏನುಮಾಡಿದರೂ ಅದನ್ನು ಹಿಡಿದು ಕೊಂಡು ಮಾಡಿ. ಆಗ ತಪ್ಪುಮಾಡುವುದಿಲ್ಲ. ನೀವು ಏನುಮಾಡುವಿರೋ ಅದು ನಿಮಗೆ ಶ್ರೇಯಸ್ಕರ ಮತ್ತು ಅನ್ಯರಿಗೂ ಶ್ರೇಯಸ್ಕರ. ನಿಮ್ಮ ಬಾಳು ಭುವಿಯಲ್ಲಿ ಸಾರ್ಥಕವಾಗುವುದು.

೯

## ಭಗವತ್ಕೃಪೆ.

ಸ್ವಾಮಿಜಿ: ಭಗವನ್ನಾಮ ದೇಹ ಮನಸ್ಸೆರಡನ್ನೂ ಪರಿಶುದ್ಧ ಮಾಡುವುದು. "ಭಗವನ್ನಾಮದಲ್ಲಿ ಆಶ್ರಯ ಪಡೆದಿರುವೆನು. ನನಗೆ ಇನ್ನು ಯಾತರ ಅಂಜಿಕೆಗೆ? ಪ್ರಪಂಚದಲ್ಲಿ ಯಾವುದು ನನ್ನನ್ನು ಬಂಧಿಸ ಬಲ್ಲದು? ಭಗವನ್ನಾಮದಿಂದ ನಾನು ಅಮರನಾಗಿರುವೆನು." ಇಂತಹ ದೃಢಶ್ರದ್ಧೆಯಿಂದ ಒಬ್ಬ ಸಾಧನೆಮಾಡಬೇಕು.

ಸಾಧನೆಯ ಗುರಿ ಏನು? ಭಗವಂತನನ್ನು ಸೇರುವುದು. ಅವನ ಅನುಗ್ರಹವನ್ನು ಪಡೆಯುವುದು. ಕಾಮಕ್ರೋಧಾದಿಗಳಿಂದ ನಮ್ಮ ಹೃದಯದಲ್ಲಿ ತುಂಬಿರುವ ಕಸವನ್ನೆಲ್ಲಾ ಗುಡಿಸುವುದಕ್ಕೆ ಸಾಧನೆಮಾಡ ಬೇಕು. ಇದನ್ನು ಮಾಡಿದಹೊರತು ಎಷ್ಟೇ ಪ್ರಯತ್ನಪಟ್ಟರೂ ನೀವು ಗುರಿ ಸೇರಲಾರಿರಿ.

ಮನಸ್ಸನ್ನು ಶುದ್ಧಮಾಡುವವರೆಗೆ ನೀವು ಅವನ ಅನುಗ್ರಹವನ್ನು ಪಡೆಯಲಾರಿರಿ; ಅವನನ್ನೂ ಸೇರಲಾರಿರಿ. ಹಲವು ಜನ್ಮಗಳಿಂದ ಕೊಳೆ ತುಂಬಿಕೊಂಡಿದೆ. ಅದನ್ನೆಲ್ಲಾ ಶುದ್ಧಿಮಾಡಬೇಕಾಗಿದೆ. ಶ್ರೀರಾಮ ಕೃಷ್ಣರು ಒಂದು ಸುಂದರ ಉಪಮಾನವನ್ನು ಕೊಡುತ್ತಿದ್ದರು: "ಸೂಜಿಗೆ ಮಣ್ಣು ಮೆತ್ತಿಕೊಂಡಿರುವವರೆಗೆ ಅಯಃಕಾಂತಶಿಲೆ ಅದನ್ನು ಆಕರ್ಷಿಸ ಲಾರದು." ಇದರಂತೆಯೇ ಭಗವದಾಲೋಚನೆ, ಭಗವದ್ಧ್ಯಾನ ಇದ ರಿಂದ ಮನಸ್ಸಿನ ಕೊಳೆಯನ್ನು ತೊಳೆಯಬಹುದು. ಒಬ್ಬ ಪಶ್ಚಾತ್ತಾಪ ದಿಂದ ಅಳುತ್ತಾ "ದೇವರೇ, ನನ್ನನ್ನು ಕ್ಷಮಿಸು, ಇನ್ನುಮೇಲೆ ತಪ್ಪನ್ನು

ನಾನು ಮಾಡುವುದಿಲ್ಲ" ಎಂದು ಬೇಡಿಕೊಳ್ಳಬೇಕು. ತಕ್ಷಣವೆ ಭಗವಂತನೆಂಬ ಅಯಃಕಾಂತಶಿಲೆ, ಜೀವಿ ಎಂಬ ಸೂಜಿಯನ್ನು ಆಕರ್ಷಿಸುವುದು. ಮನಸ್ಸು ವಿಶುದ್ಧವಾದೊಡನೆ ಅಲ್ಲಿಗೆ ಭಗವತ್ಕೃಪೆ ಹರಿಯುವುದು. ತಾನಾಗಿಯೇ ಭಗವತ್ಸಾಕ್ಷಾತ್ಕಾರವಾಗುವುದು.

ಜ್ಞಾನಭಾಸ್ಕರ ದೇವರು. ಭಕ್ತನಮೇಲೆ ತನ್ನ ಕೃಪೆಯನ್ನು ಬೀರಿದಾಗ ಮಾತ್ರ ಅವನನ್ನು ತಿಳಿದುಕೊಳ್ಳಬಹುದು. ಪ್ರಾಪಂಚಿಕ ಭೋಗದಮೇಲೆ ಆಸೆ ಇರುವತನಕ ಭಗವಂತನನ್ನು ತಿಳಿದುಕೊಳ್ಳುವುದಕ್ಕಾಗಲೀ, ಅವನನ್ನು ನೋಡುವುದಕ್ಕಾಗಲೀ ಆಸೆ ಹುಟ್ಟುವುದಿಲ್ಲ. ಮಕ್ಕಳಿಗೆ ಆಟದ ಸಾಮಾನು ಅಥವಾ ತಿಂಡಿ ಸಿಕ್ಕಿದರೆ ತಮ್ಮನ್ನೇ ಮರೆತು ಬಿಡುವುವು. ಸ್ವಲ್ಪ ಹೊತ್ತಾದಮೇಲೆ ಆಟದ ಸಾಮಾನಿನ ವ್ಯಾಮೋಹ ಕಡಿಮೆಯಾಗಿ ಜಗನ್ಮಾತೆ ಎಡೆಗೆ ಹೋಗಲೆತ್ನಿಸುವರು. ಮನುಷ್ಯರೂ ಹೀಗೆಯೇ ಪ್ರಾಪಂಚಿಕ ಸುಖಭೋಗಗಳಿಂದ ಬೇಜಾರಾದಾಗ ಮಾತ್ರ ದೇವರನ್ನು ಅರಸುವರು. ಆಗ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಆಲೋಚನೆ ಮನಸ್ಸಿನಲ್ಲಿ ತೀವ್ರವಾಗುವುದು. ಇತರರು ದೇವರ ಮೇಲೆ ಮಾತನಾಡುವುದನ್ನು ಕೇಳಲು ಇಚ್ಛಿಸುವರು. ತಮ್ಮ ಜೀವನದಲ್ಲೇ ಅವನನ್ನು ಪಡೆಯಲು ಯತ್ನಿಸುವರು.

ಸುಲಭವಾಗಿ ದಿವ್ಯ ಆಲೋಚನೆ ಮನಸ್ಸಿನಲ್ಲಿ ಏಳುವುದಿಲ್ಲ. ಇದನ್ನೇ ಗಮನದಲ್ಲಿಡಿ. ಯಾರಲ್ಲಿ ಅದು ಇದೆಯೋ ಅದು ಭಗವಂತನ ಕೃಪೆಯಿಂದ. ಈ ಮಾಯಾಜಗತ್ತಿನಲ್ಲಿ ಮನುಷ್ಯ ಹಲವು ಪೆಟ್ಟುತಿಂದು ಪಡಬಾರದುದನ್ನೆಲ್ಲ ಅನುಭವಿಸುವನು. ಆದರೂ ತಮ್ಮ ದಾರಿಯನ್ನು ಬದಲಾಯಿಸಲೊಲ್ಲರು. ಇದೊಂದು ವಿಚಿತ್ರ. ಪುನಃಪುನಃ ಅವರು ಪೆಟ್ಟನ್ನು ತಿನ್ನಲು ಅದೇ ಸ್ಥಳಕ್ಕೆ ಹೋಗುವರು. ಯಾರಾದರೂ ಬುದ್ಧಿವಾದ ಹೇಳಿದರೆ ಅವರಮೇಲೆ ಕೋಪ ಇವರಿಗೆ.

ಸನ್ಯಾಸಿ ಜೀವನವನ್ನು ಸ್ವೀಕರಿಸಲು ಇಚ್ಛಿಸುವ ಮಕ್ಕಳಿಗೆ ತಂದೆ ತಾಯಿಗಳು ಹೇಗೆ ಆತಂಕವನ್ನು ತಂದೊಡ್ಡುವರು ಕಾಣುವುದಿಲ್ಲವೇ? ಆದರೆ ಯಾರು ನೀಚಜೀವನ ನಡೆಸಿ, ತನಗೆ, ತನ್ನ ದೇಶಕ್ಕೆ ಕಂಟಕನಾಗುವನೋ ಅವನನ್ನು ತಿದ್ದಲು ಸ್ವಲ್ಪವೂ ಯತ್ನಿಸುವುದಿಲ್ಲ. ಶುದ್ಧ ಜೀವನವನ್ನು ಕೈಕೊಳ್ಳಬೇಕೆಂದು ಯತ್ನಿಸಿದಾಗ ಮಾತ್ರ ಆತಂಕಗಳೆಲ್ಲ ಬರುವುವು. ತಮ್ಮ ಸ್ಥಿತಿಗೆ ಅವನನ್ನು ಎಳೆಯುವುದಕ್ಕೆ ಕೈಲಾದ ಪ್ರಯತ್ನವನ್ನೆಲ್ಲ ಮಾಡುವರು.

ಒಬ್ಬ ಸನ್ಯಾಸಿಯ ತಂದೆ ತನ್ನ ಹುಡುಗನನ್ನು ಕುರಿತು ಒಮ್ಮೆ ಏನು ಹೇಳಿದ ಗೊತ್ತೆ? "ಅವನು ಸನ್ಯಾಸಿಯಾಗುವುದಕ್ಕಿಂತ ಸತ್ತು ಹೋಗಿದ್ದರೆ ಸಂತೋಷಪಡುತ್ತಿದ್ದೆ. ಮೃತ್ಯುವಿನಮೇಲೆ ನನ್ನ ಅಧಿಕಾರ ವಿಲ್ಲ. ಎಲ್ಲರೂ ಅದಕ್ಕೆ ಸೇರಲೇಬೇಕು. ಆದರೆ ಯಾವುದು ನನಗೆ ಸೇರಿದುದೋ ಅದನ್ನು ಮತ್ತೊಬ್ಬರು ತೆಗೆದುಕೊಂಡುಹೋಗುವುದನ್ನು ಸಹಿಸಲಾರೆ." ಇದೇ ಪ್ರಪಂಚ, ಸ್ವಾರ್ಥತೆಯಿಂದ ತುಂಬಿತುಳುಕುತ್ತಿದೆ.

ತಮ್ಮ ಸ್ವಾರ್ಥತೆಗೆ ಧಕ್ಕೆ ಬಂದೊಡನೆಯೇ ಜನರು ಕೋಪಾವಿಷ್ಟ ರಾಗುವರು. ಒಬ್ಬ ನಿಜವಾದ ಸನ್ಯಾಸಿಯಾದರೆ ಅದು ಅವನಿಗೆ ಮಾತ್ರ ಶುಭವಲ್ಲ. ಅವನ ಕುಲದವರಿಗೆಲ್ಲ ಶ್ರೇಯಸ್ಕರ ಎಂಬುದನ್ನು ಅವನು ತಿಳಿದುಕೊಳ್ಳಲಾರ.

ಈಗಿನ ಕಾಲದಲ್ಲಿ ಜನರು ತುಂಬಾ ದುಡುಕುತ್ತಿರುವರು. ಕೆಲಸ ಮಾಡುವುದಕ್ಕೆ ಮುಂಚೆ ಕೂಲಂಕಶವಾಗಿ ಅದನ್ನು ಕುರಿತು ಆಲೋಚಿಸು ವುದೇ ಇಲ್ಲ. ತಮಗೆ ಯಾವುದು ತೋರುವುದೋ ಅದನ್ನು ಮಾಡುವರು. ಅದರಿಂದ ತಮಗೆ ಒಳ್ಳೆಯದಾಗುವುದೇ ಇಲ್ಲವೇ ಎಂಬುದನ್ನು ಕುರಿತು ಆಲೋಚಿಸುವುದೇ ಇಲ್ಲ. ತಪ್ಪು ಇಲ್ಲೇ ಕೊನೆಗಾಣುವುದಿಲ್ಲ. ತಮ್ಮ ಮಕ್ಕಳನ್ನು ಕೂಡ ತಮ್ಮಂತೆ ದುಃಖಪಡುವಂತೆ ತರಬೇತು ಮಾಡುವರು.

ಪ್ರತಿಯೊಬ್ಬರೂ ಹಲವು ಜನ್ಮಗಳ ಸಂಸ್ಕಾರದೊಂದಿಗೆ ಹುಟ್ಟುವರು. ಭೋಗಕ್ಕೆ ಆಗಲೇ ಆಸೆ ಬಲವಾಗಿದೆ. ಬಾಲ್ಯದಲ್ಲಿ ಅವನಿಗೆ ಸಿಕ್ಕುವ ತರಬೇತು, ಆ ಸ್ವಭಾವವನ್ನು ಇನ್ನೂ ಉದ್ದೀಪನಗೊಳಿಸುವುದು. ಆಧ್ಯಾತ್ಮಿಕ ಜೀವನಕ್ಕೆ ಇರುವ ಹಲವು ಆತಂಕಗಳಿಂದ ಪಾರಾದವರು ಅಥವಾ ಹಾಗೆ ಆಗುವುದಕ್ಕೆ ಪ್ರಯತ್ನಿಸುತ್ತಿರುವವರು ಎಷ್ಟು ಅದೃಷ್ಟವಂತರು!

ಭಗವತ್ಕೃಪೆಯಿಂದ ಪ್ರಪಂಚವನ್ನು ತ್ಯಜಿಸಲು ನಿನಗೆ ಸಾಧ್ಯ ವಾಯಿತು. ಜೀವನದ ಗುರಿಯನ್ನು ಮುಟ್ಟುವುದಕ್ಕೆ ಈ ಸದವಕಾಶವನ್ನು ಕಳೆದುಕೊಳ್ಳಬೇಡಿ. ಜಾಗ್ರತರಾಗಿ ಸಾಧನೆಮಾಡಿ. ಭಗವಂತನನ್ನು ನೋಡಿ ಮತ್ತಾವುದನ್ನೂ ಲೆಕ್ಕಿಸಬೇಡಿ. ಭಗವಂತನನ್ನು ಮಾತ್ರ ನೆಚ್ಚಿ. ನಿಮ್ಮ ಜವಾಬ್ದಾರಿಯನ್ನೆಲ್ಲಾ ಅವನು ತೆಗೆದುಕೊಳ್ಳುವನು. ಆಗ ನೋಡು ವಿರಂತೆ ನಿಮ್ಮ ಹೀನ ಆಸೆ ಆಕಾಂಕ್ಷೆಗಳೆಲ್ಲ ನಿಮ್ಮಿಂದ ದೂರವಾಗುವುದನ್ನು.

ನಮ್ಮ ಅಲ್ಪಮತಿಯಿಂದ ಭಗವಂತನ ವಿಷಯವಾಗಿ ಏನನ್ನು ತಿಳಿದುಕೊಳ್ಳಬಲ್ಲೆವು? ಅದಕ್ಕೇ ಸಂಪೂರ್ಣ ಅವನಲ್ಲಿ ಶರಣಾಗತರಾಗಿ ಎಂದು ನಿಮಗೆ ಹೇಳುವುದು. ಅವನ ಇಚ್ಛೆ ನೆರವೇರಲಿ. ಆತ ಸರ್ವ

ಶಕ್ತ. ಮನುಷ್ಯನಿಗೆ ಏನು ಶಕ್ತಿ ಇದೆ? ನಿಮ್ಮ ಕೈಲಾಗುವುದು ಭಗವಂತನನ್ನು ಪ್ರೀತಿಸುವುದು ಮಾತ್ರ. ಅವನನ್ನು ಪಡೆಯಬೇಕೆಂಬ ಹಂಬಲಿಕೆ ತೀವ್ರವಾಗಿರಲಿ. ಪ್ರಪಂಚವೆಲ್ಲ ಯಾವುದಾದರೊಂದಕ್ಕೆ ಹುಚ್ಚಾಗಿರುವುದು. ಪ್ರಾಪಂಚಿಕ ಕ್ಷಣಿಕವಸ್ತುಗಳ ಮೇಲೆ ಏತಕ್ಕೆ ಹುಚ್ಚನಾಗಿರಬೇಕು. ನಮ್ಮ ಗುರಿ ಭಗವತ್ಸಾಕ್ಷಾತ್ಕಾರ. ಕೇವಲ ಕರ್ಮ ನಮ್ಮ ಜೀವನದ ಗುರಿಯಾಗಲಾರದು. ನಿಸ್ವಾರ್ಥತೆ ಕೂಡ ಗುರಿಯಲ್ಲ. ಇದೂ ಭಗವಂತನನ್ನು ಪಡೆಯುವುದಕ್ಕೆ ಮಾರ್ಗ.

ಸಾಧನೆಮಾಡಿ ದೇವರಕಡೆಗೆ ಮುಂದುವರಿ. ಆಗ ದೇವರೊಬ್ಬನೇ ಸತ್ಯ, ಉಳಿದವರೆಲ್ಲ ಮಿಥ್ಯವೆಂದು ತೋರುವುದು. ಅವನ ಸಾಕ್ಷಾತ್ಕಾರವೊಂದೆ ನಮ್ಮ ಜೀವನದ ಪರಮಗುರಿ. ಕೆಲವು ದಿನ ಸಾಧನೆ ಮಾಡಿದ ಮೇಲೆ ನಿಮಗೆ ಕೆಲವು ಅನುಭವಗಳಾಗಬಹುದು. ಆದರೆ ಎಲ್ಲಾ ಸಿಕ್ಕಿ ಹೋಯಿತು ಎಂದು ತಿಳಿದುಕೊಳ್ಳಬೇಡಿ. ಸಾಧನೆ ಬಿಡಬೇಡಿ. ಮುಂದೆ ಮುಂದೆ ಹೋಗಿ. ಆಗ ಭಗವತ್ಸಾಕ್ಷಾತ್ಕಾರವಾಗುವುದು. ಅವನ ದರ್ಶನ ಲಭಿಸುವುದು. ಬಹಳ ಸಲಿಗೆಯಿಂದ ಆಗ ನೀನು ಅವನನ್ನು ತಿಳಿದುಕೊಳ್ಳಬಹುದು.

ನನ್ನ ಹುಡುಗರೆ ಕೇಳಿ. ನೀವೆಲ್ಲ ಒಳ್ಳೆ ವಂಶದಲ್ಲಿ ಹುಟ್ಟಿದವರು, ವಿದ್ಯಾವಂತರು. ಬೇಕಾದಷ್ಟು ಓದಿ ಆಗಿದೆ. ವಾದ, ಚರ್ಚೆ ಆಗಿದೆ. ಮತ್ತೆ ಏತಕ್ಕೆ ಅದನ್ನೇ ಆಶಿಸುವಿರಿ? ಈಗ ಮನಸ್ಸನ್ನು ಶಾಂತಿಗೊಳಿಸಿ ಭಗವಂತನ ಮೇಲೆ ನಿಲ್ಲಿಸಿ. ನಿಮ್ಮ ಮನಸ್ಸಿಗೆ ಭಗವತ್ಸಾಗರದಲ್ಲಿ ಮುಳುಗಿ ಎಂದು ಹೇಳಿ. ನೀವು ಪ್ರಪಂಚವನ್ನು ತೊರೆದಿರುವಿರಿ. ಕೆಲಸಕ್ಕೆ ಬಾರದ ವಿಷಯಗಳಲ್ಲೇ ಈಗಲೂ ನೀವು ನಿರತರಾಗಿದ್ದರೆ ಇಹಪರ ಎರಡನ್ನೂ ಕಳೆದುಕೊಳ್ಳುವಿರಿ. ಭಗವಂತನ ದಯೆಯಿಂದ ಒಳ್ಳೆಯ ಆಸೆ ಆಕಾಂಕ್ಷೆ ನಿಮ್ಮಲ್ಲಿದೆ. ಈ ದಯೆಯನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಿ. ಕ್ಷಣಿಕ ಪ್ರಾಪಂಚಿಕ ಸುಖಕ್ಕಾಗಿ ಭಗವತ್ಸಾಕ್ಷಾತ್ಕಾರದಿಂದ ಬರುವ ಶಾಶ್ವತಾನಂದವನ್ನು ಬಲಿಕೊಡಬೇಡಿ. "ಹೇ ಭಗವಂತ! ನಿನ್ನನ್ನು ಪಡೆಯುವುದಕ್ಕೆ ನನ್ನ ದಾರಿಯಲ್ಲಿರುವ ಆತಂಕಗಳೆಲ್ಲದರಿಂದ ಪಾರಾಗುವ ಶಕ್ತಿಯನ್ನು ಅನುಗ್ರಹಿಸು" ಎಂದು ಪ್ರಾರ್ಥಿಸಿ.

ಸಚ್ಚಿದಾನಂದದ ಸವಿಯನ್ನು ಯಾರು ಸ್ವಲ್ಪ ನೋಡುವರೋ ಅವರಿಗೆ ಪ್ರಾಪಂಚಿಕ ಸುಖ ಸಪ್ಪೆಯಾಗುವುದು. ಪ್ರಪಂಚದಲ್ಲಿ ಏನಿದೆ? ಹೆಸರು, ಕೀರ್ತಿ, ಐಶ್ವರ್ಯ, ಮಕ್ಕಳು ಯಾವುದೂ ಮನಸ್ಸಿಗೆ ಶಾಂತಿ

ಯನ್ನು ಕೊಡಲಾರದು. ಅವನ ದುಃಖ ವ್ಯಾಕುಲಗಳನ್ನು ಮತ್ತೂ ಹೆಚ್ಚಿಸುವುದು.

ನೆಂಟರು ಇಷ್ಟರು ಎಲ್ಲರನ್ನೂ ತೊರೆದು ನೀನೇತಕ್ಕೆ ಇಲ್ಲಿಗೆ ಬಂದೆ? ನಿನ್ನ ಭಾರವನ್ನು ಕಡಿಮೆಮಾಡಿಕೊಳ್ಳುವುದಕ್ಕೋ? ಹೆಚ್ಚುಮಾಡಿಕೊಳ್ಳುವುದಕ್ಕೋ ? ನಿಮ್ಮ ಕಣ್ಣೆದುರಿಗೆ ಕಾಣುವ ಭೋಗ್ಯವಸ್ತುಗಳೆಲ್ಲ ನೀವು ಕಣ್ಣುಮುಚ್ಚಿದೊಡನೆಯೇ ಮಾಯವಾಗುವುವು. ನಿಜವಾಗಿ ಹೇಳುವುದಾದರೆ ಅವು ನಿಮ್ಮನ್ನು ಹೆಚ್ಚುಹೆಚ್ಚು ಅಂಧಕಾರಕ್ಕೆ ಎಳೆಯುವುವು. ಜ್ಞಾನ ಮಾರ್ಗದಲ್ಲಿ ನಡೆಯಬೇಕೆಂದು ಇಚ್ಛಿಸುವಿರೋ? ಒಮ್ಮೆ ಅವನ ಕ್ಷಣಿಕದರ್ಶನ ನಿಮಗೆ ಲಭಿಸಿತೆಂದರೆ ಹಿಂತಿರುಗಕೂಡದು. ವಿಷಯವಸ್ತುಗಳಕಡೆ ಕಣ್ಣನ್ನು ಹಾಕಬೇಡ. ಹಾಗೆ ಮಾಡಿದರೆ ನೀನು ಅದರಲ್ಲಿ ಮುಳುಗಿಹೋಗುವೆ. ಆಸೆಯ ಪ್ರಭಾವ ಮಹೋತ್ಪಾತಕಾರಿ. ಒಮ್ಮೆ ಅವು ನಿನ್ನ ಮನಸ್ಸಿನಮೇಲೆ ಪ್ರಭಾವವನ್ನು ಬೀರಿತು ಎಂದರೆ ಆಳಆಳಕ್ಕೆ ಅವು ನಿನ್ನನ್ನು ಸೆಳೆಯುವುವು. ಆದರೂ ನೀನು ಕೆಳಗೆಹೋಗುತ್ತಿರುವುದು ಕಾಣುವುದೇ ಇಲ್ಲ. ಇಂತಹ ಅಪಾಯದಿಂದ ಪಾರಾಗುವುದಕ್ಕೆ ಇರುವುದೊಂದೇ ಮಾರ್ಗ. ಇದೇ ಭಗವಂತನಲ್ಲಿ ಶರಣಾಗುವುದು.

## ೧೦

## ತ್ಯಾಗಶಕ್ತಿ

ಸ್ವಾಮಿಜಿ: ಭಗವಂತನಲ್ಲಿ ಸಂಪೂರ್ಣ ಶರಣಾಗಿ. ಸಂಪೂರ್ಣ ಶರಣಾಗತಿ ಸುಲಭವಲ್ಲ. " ದೇವರನ್ನು ನಾನು ನೋಡಿಲ್ಲ. ನನಗೆ ಅವನು ಗೊತ್ತಿಲ್ಲ. ಅವನನ್ನು ಪ್ರೀತಿಸಿ ಅವನಲ್ಲಿ ಶರಣಾಗತನಾಗುವುದು ಹೇಗೆ? " ಎಂಬ ಸಂದೇಹ ಮನಸ್ಸಿನಲ್ಲಿ ಮೂಡುತ್ತಾ ಇರುತ್ತವೆ. ಭವ್ಯ ಆದರ್ಶ ಮತ್ತು ಆಲೋಚನೆಗಳನ್ನು ತೊರೆದು ಪ್ರಾಪಂಚಿಕ ವಿಷಯಗಳ ಕಡೆ ಹೋಗದಂತೆ ಮಾಡುವುದು ಮನಸ್ಸಿನ ಸ್ವಭಾವ.

ಒಮ್ಮೆ ಒಬ್ಬ ಭಕ್ತ ಶ್ರೀರಾಮಕೃಷ್ಣರನ್ನು '' ಸ್ವಾಮಿಜಿ, ಭಗವಂತನ ಹೆಸರನ್ನು ಉಚ್ಚರಿಸುವುದಕ್ಕೆ ನನಗೆ ಇಚ್ಛೆ ಇಲ್ಲ" ಎಂದನು. ಶ್ರೀರಾಮಕೃಷ್ಣರು "ಯಾವುದು ನಿನ್ನ ಮನಸ್ಸನ್ನು ಸೆಳೆಯುವುದು '' ಎಂದು ಕೇಳಿದರು. ಅದಕ್ಕೆ ಆತ " ಅದು ನನ್ನ ಟಗರು, ಅದನ್ನು ನಾನು ಎಲ್ಲಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತೇನೆ '' ಎಂದನು. ಅದಕ್ಕೆ ಶ್ರೀರಾಮಕೃಷ್ಣರು " ಆಗಲಿ ನೀನು ಟಗರನ್ನು ನೋಡಿಕೊಳ್ಳುತ್ತಿರುವಾಗ ಭಗವಂತನಿಗೆ ಆ ಸೇವೆಯನ್ನೆಲ್ಲ ಅದರ ಮೂಲಕ ಮಾಡುತ್ತಿರುವೆ ಎಂದು ಭಾವಿಸು.

ಇದನ್ನು ನಿಷ್ಠೆಯಿಂದ ಕೆಲವುದಿನ ಮಾಡು. ಅನಂತರ ಎಲ್ಲ ಸರಿಹೋಗುವುದು" ಎಂದರು.

ಜನನಮರಣಾತೀತ ಜೀವನಕ್ಕೆ ಗುರು ಶಿಷ್ಯನಿಗೆ ಮಾರ್ಗ ತೋರುವನು. ಅವನನ್ನು ಎಲ್ಲಾ ಅಪಾಯಗಳಿಂದಲೂ ಪಾರುಮಾಡುವನು. ಗುರುವಿನ ಮಾತಿನಲ್ಲಿ ಶ್ರದ್ಧೆ ಇಟ್ಟು ಶಿಷ್ಯ ಅವನು ಹೇಳಿದಂತೆ ಮಾಡಲಿ. ಕೆಲವು ಕಾಲದಮೇಲೆ ಮನಸ್ಸಿನ ಕಶ್ಮಲ ಮಾಯವಾಗಿ ಭಗವಂತನ ಜ್ಯೋತಿ ಪ್ರಕಾಶವಾಗುವುದನ್ನು ನೋಡುವನು. ಸಿದ್ಧಗುರುವಿನಮೇಲೆ ಇಡುವ ಶ್ರದ್ಧೆಯಿಂದ ಎಲ್ಲವನ್ನೂ ಸಾಧಿಸಬಹುದು. ಅಂತಹ ಗುರುವನ್ನು ಭೂಮಿಯಮೇಲೆ ಭಗವಂತನ ಅವತಾರವೆಂದು ಶಿಷ್ಯ ಭಾವಿಸಬೇಕು. ಅನವರತ ಗುರುಧ್ಯಾನದಿಂದ ಶಿಷ್ಯನ ಮನಸ್ಸು ದೇಹ ಶುದ್ಧವಾಗುವುದು. ನಂತರ ಶಿಷ್ಯನೆದುರಿಗೆ ಗುರು ಪ್ರತ್ಯಕ್ಷನಾಗಿ ಅವನ ಇಷ್ಟದೇವತೆಯನ್ನು ತೋರಿ ಮಾಯವಾಗುವನು. ಗುರುಸ್ತೋತ್ರದಲ್ಲಿ

**ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೊ ಮಹೇಶ್ವರಃ**
**ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ**

ಗುರುವೇ ಬ್ರಹ್ಮ, ವಿಷ್ಣು, ಮಹೇಶ್ವರ. ಗುರು ಪರಬ್ರಹ್ಮನಲ್ಲದೆ ಬೇರಲ್ಲ. ಗುರುವಿಗೆ ನಮಸ್ಕಾರ.

ಶಿಷ್ಯನಿಗೆ ಗುರುವಿನಲ್ಲಿ ಅಚಲ ಶ್ರದ್ಧೆ ಇದ್ದರೆ ಜ್ಞಾನಭಕ್ತಿಯನ್ನು ಪಡೆಯುವುದಕ್ಕೆ ಸುಲಭ. ಮುಖ್ಯವಾಗಿ ಬೇಕಾಗಿರುವುದು ಭಕ್ತಿ. ಇದೊಂದು ಸಿದ್ಧಿಸಿದರೆ ಎಲ್ಲಾ ಸಿದ್ಧಿಸಿದಂತೆ.

ಹೃದಯಪರಿಶುದ್ಧಿ ಇಲ್ಲದೆ ಭಗವತ್ಸಾಕ್ಷಾತ್ಕಾರ ಅಸಾಧ್ಯ. ಗುರು ಸಿದ್ಧನಾದ ಪೂರ್ಣ ಜ್ಞಾನಿಯಾಗಿದ್ದರೆ ಶಿಷ್ಯನ ಅಹಂಕಾರ ಬೇಗ ಅಳಿಯುವುದು. ಆದರೆ ಗುರುವೇ ಸಿದ್ಧನಾಗಿಲ್ಲದೆ ಇದ್ದರೆ, ಅವನು ಮತ್ತು ಶಿಷ್ಯ ಎಲ್ಲರೂ ವ್ಯಥೆಪಡಬೇಕಾಗುವುದು. ಶಿಷ್ಯನಿಗೆ ತನ್ನ ಅಹಂಕಾರದಿಂದಾಗಲಿ, ಸಂಸಾರಬಂಧನದಿಂದಾಗಲಿ ಪಾರಾಗುವುದಕ್ಕೆ ಸಾಧ್ಯವಿಲ್ಲ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಪೂರ್ಣತೆಯನ್ನು ಮುಟ್ಟದ ಗುರು ಶಿಷ್ಯನಿಗೆ ಮುಕ್ತಿಯನ್ನು ಕೊಡಲಾರ. ಸಾಧಾರಣ ಮನುಷ್ಯನಿಗೆ ಮತ್ತೊಬ್ಬರನ್ನು ಸಂಸಾರಬಂಧನದಿಂದ ಪಾರುಮಾಡಲು ಹೇಗೆ ಸಾಧ್ಯ? ಜಗನ್ಮೋಹನಕಾರಿಯಾದ ಮಾಯೆಯ ವಶದಿಂದ ಜೀವಿಯನ್ನು ಪಾರು ಮಾಡಲು ಭಗವಂತನೊಬ್ಬನಿಗೆ ಸಾಧ್ಯ.

ಭಗವದ್ದರ್ಶನ ಪಡೆದವನು ಮಾತ್ರ ಮತ್ತೊಬ್ಬನಿಗೆ ಮುಕ್ತಿಮಾರ್ಗ

ವನ್ನು ತೋರಬಲ್ಲ. ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿಲ್ಲವೊ, ಅವನ ಅಪ್ಪಣೆ ಇಲ್ಲವೊ, ಭಗವಂತನ ಶಕ್ತಿಯಿಂದ ಪೋಷಿತವಾಗಿಲ್ಲವೊ ಅಂತಹವನು ಭವಬಂಧನದಿಂದ ಮತ್ತೊಬ್ಬನನ್ನು ಹೇಗೆ ಪಾರುಮಾಡಬಲ್ಲ? ಕುರುಡನಿಗೆ ಕುರುಡ ಮಾರ್ಗದರ್ಶಕನಾದರೆ, ಇಬ್ಬರಿಗೂ ದುಃಖ ಖಂಡಿತ ಭಗವತ್ಸಾಕ್ಷಾತ್ಕಾರವಾದರೆಮಾತ್ರ ಒಬ್ಬನಿಗೆ ಅಂತರ್ದರ್ಶನ ಸಾಧ್ಯ. ಆಗ ಮಾತ್ರ ಒಬ್ಬನಿಗೆ ಮತ್ತೊಬ್ಬನ ಕಷ್ಟ ತಿಳಿದು ಸರಿಯಾದ ಬುದ್ಧಿವಾದವನ್ನು ಕೊಡಬಲ್ಲ.

ಭಗವಂತನಮೇಲೆ ನಿಜವಾದ ಭಕ್ತಿ ಇದ್ದು ಆಧ್ಯಾತ್ಮಿಕ ಜೀವನದಲ್ಲಿ ನಡೆಯಬೇಕೆಂಬ ಕಾತರವಿದ್ದರೆ, ಭಗವಂತನ ದಯೆಯಿಂದ ಅಂತಹವನಿಗೆ ಒಬ್ಬ ನಿಜವಾದ ಗುರು ದೊರಕುವುದರಲ್ಲಿ ಸಂದೇಹವಿಲ್ಲ.

ಆತ್ಮಸಾಕ್ಷಾತ್ಕಾರವನ್ನು ಪಡೆದ ಗುರುವಿನ ಆಶ್ರಯಪಡೆದವರು ತಮ್ಮ ಆತ್ಮವಿಕಾಸದ ವಿಷಯದಲ್ಲಿ ಕಾತರರಾಗಬೇಕಾದ್ದಿಲ್ಲ. ಅವರು ಸರಿಯಾದ ದಾರಿಯಲ್ಲಿ ಇರುವರು. ಅವರ ಆದ್ಯಕರ್ತವ್ಯ ಈಗ ಅದನ್ನು ಅನುಸರಿಸುವುದು. ದಾರಿಯಲ್ಲಿ ಯಾವುದಾದರೂ ಆತಂಕಬಂದರೆ ಏನಾ ದರೂ ತಪ್ಪುಮಾಡಿದರೆ ಭಗವಂತ ಅವರನ್ನು ರಕ್ಷಿಸಿ, ಸರಿಯಾದ ಮಾರ್ಗ ವನ್ನು ತೋರುವುದರಲ್ಲಿ ಸಂದೇಹವಿಲ್ಲ. ಗುರುವಿನ ವಚನದಲ್ಲಿ ಶ್ರದ್ಧೆ ಇಟ್ಟು ಅವನು ತೋರಿದ ದಾರಿಯಲ್ಲಿ ನಡೆಯಲಿ ಸಾಕು.

ಈ ಪ್ರಪಂಚ ಹೇಗಿದೆ? ಹಳ್ಳಿಯಕಡೆ ಬೆಳೆಯುವ ಎಲಚಿಹಣ್ಣಿ ನಂತೆ ಇದೆ. ಬರೀಬೀಜ ಮತ್ತು ಸಿಪ್ಪೆ. ಅದನ್ನು ತಿಂದರೆ ಹೊಟ್ಟೆ ನೋವು, ಹುಳಿತೇಗು ಇಷ್ಟೇ ಬರುವುದು.

ನಿಮ್ಮದೆಲ್ಲ ಶುದ್ಧ ಹೊಸಬಾಳು. ಈಗ ಮನಸ್ಸು ಪ್ರಪಂಚದ ಪ್ರಲೋ ಭನಕ್ಕೆ ಸಿಕ್ಕಿದೆ ನಿಮ್ಮ ಅಂಕೆಯೊಳಗೆ ಇರುವುದು. ಈಗಿನಿಂದ ಪ್ರಯತ್ನ ಪಟ್ಟರೆ ನೀವು ದೇವರನ್ನು ನೋಡಬಹುದು. ಯುವಕರಾಗಿರುವ ಸಮ ಯದಲ್ಲಿ ದೇವರಮೇಲೆ ಸುಲಭವಾಗಿ ಮನಸ್ಸನ್ನು ಇಡಬಹುದು. ಒಮ್ಮೆ ಅದು ಚದುರಿತೆಂದರೆ ಒಟ್ಟುಗೂಡಿಸುವುದು ಬಹಳ ಕಷ್ಟ.

ವೈಷ್ಣವರಲ್ಲಿ ಈ ಸುಂದರ ನುಡಿ ಇದೆ. "ಜೀವಿಗೆ ಮೂರರ ಕೃಪೆ ಇವೆ. ಗುರು, ದೇವರು, ಭಕ್ತ. ಆದರೆ ಒಂದರ ದಯೆ ಇಲ್ಲದೆ ಇದ್ದರೆ ಸರ್ವನಾಶವಾಗುವುದು." ಇದರ ಅರ್ಥ ಭಗವಂತನ ದಯೆಯಿಂದ ಶಿಷ್ಯ ನಿಗೆ ಗುರುಕೃಪೆ ದೊರಕಿದೆ. ಒಳ್ಳೆಯ ಭಾವನೆಗಳೂ ಇವೆ. ಜೊತೆಗೆ ಸಾಧುಸಂಗವೂ ಇದೆ. ಈಗ ಬೇಕಾಗಿರುವುದು ಒಂದರ ಅನುಗ್ರಹ.

ಅದೇ ಮನಸ್ಸು. ಮನಸ್ಸು ಸರಿಯಾಗಿದ್ದರೆ ಎಲ್ಲವನ್ನೂ ಸಾಧಿಸಬಹುದು. ಮನಸ್ಸು ಚಂಚಲವಿಲ್ಲದೆ ಇದ್ದರೆ ಮಾತ್ರ ಇತರ ಕೃಪೆಯಿಂದ ಪ್ರಯೋಜನ ಪಡೆಯಬಹುದು. ಮನಸ್ಸನ್ನು ನಿಗ್ರಹಕ್ಕೆ ತರಬೇಕು. ಇದನ್ನು ಮಾಡಿದ ಹೊರತು ನಮ್ಮ ಪ್ರಯತ್ನವೆಲ್ಲ ನಿಷ್ಫಲ.

ಅದಕ್ಕೇ ಹುಡುಗರೆ, ನಿಮ್ಮನ್ನು ಎಚ್ಚರಿಸುತ್ತೇನೆ. ಜಾಗ್ರತೆ! ನಿಮ್ಮ ಮನಸ್ಸು ಇನ್ನೂ ಚಂಚಲವಾಗಿಲ್ಲ. ಅದು ಹಾಗೆ ಮಾಡುವುದಕ್ಕೆ ಮುಂಚೆ ಲಗಾಮನ್ನು ಬಿಗಿಹಿಡಿಯಿರಿ. ಮಾವುತ ದೊಡ್ಡ ಆನೆಗೆ ತರಬೇತು ಕೊಟ್ಟು ತಾನು ಹೇಳಿದ ಕೆಲಸವನ್ನು ಅದರಿಂದ ಮಾಡಿಸುವ ಹಾಗೆ ನಾವು ಹೇಳಿದಂತೆ ಮನಸ್ಸು ಕೇಳುವಂತೆ ಮಾಡಬೇಕು. ಅದು ನಮ್ಮ ಯಜಮಾನನಾಗಬಾರದು. ಮನಸ್ಸಿಗೆ ಭೋಗದಾಸೆಯನ್ನು ತೊರೆಯುವಂತೆ ಮಾಡುವುದೇ ತರಬೇತು ಕೊಡುವುದಕ್ಕೆ ಇರುವ ಏಕಮಾತ್ರ ದಾರಿ. ಇದನ್ನು ಮಾಡಿದೊಡನೆಯೆ ಅದು ನಿಮ್ಮ ಸೇವಕನಾಗುವುದು. ಗೀತಾ ಮತ್ತು ಇತರ ಶಾಸ್ತ್ರಗಳು ತ್ಯಾಗವನ್ನು ಒತ್ತಿ ಒತ್ತಿ ಹೇಳುವುದೇ ಇದಕ್ಕಾಗಿ.

ನಮಗೆ ಬೇಕಾಗಿರುವುದು ತ್ಯಾಗ. ಅದೊಂದೇ ಮಾರ್ಗ. ಪ್ರಪಂಚದ ಪ್ರಲೋಭನೆಗೆ ಬೀಳದವರು ಮಾತ್ರ ತ್ಯಾಗಮಹಾತ್ಮ್ಯೆಯನ್ನು ಅರಿಯಬಲ್ಲರು. "ಮರಿಯಾಗಿರುವಾಗ ಗಿಳಿಗೆ ಮಾತನಾಡಲು ಕಲಿಸಬಹುದು. ದೊಡ್ಡದಾದಮೇಲೆ ಸಾಧ್ಯವಿಲ್ಲ. ಆಗ ಕಾ, ಕಾ ಎಂದು ಮಾತ್ರ ಕಿರಿಚುವುದು" ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು.

ಎಳೆಯ ಮನಸ್ಸಿನಮೇಲೆ ಭಗವದಾಲೋಚನೆ ಅಚ್ಚಳಿಯದ ಪರಿಣಾಮವನ್ನು ಬಿಡುವುದು. ಜೀವನದ ಭವ್ಯಆದರ್ಶಗಳನ್ನು ತಿಳಿದುಕೊಳ್ಳಬೇಕಾದರೆ ಯೌವನದಲ್ಲಿ ಮಾತ್ರ ಸಾಧ್ಯ. ವಯಸ್ಸಾದಂತೆಲ್ಲ ಮನಸ್ಸು ಹಲವಾರು ವಿಷಯದಲ್ಲಿ ತಲ್ಲೀನವಾಗುವುದು; ಚಂಚಲವಾಗುವುದು. ಯಾವಾಗಲೂ ಚಲಿಸುತ್ತಿರಬೇಕೆಂದು ಆಶಿಸುವುದು. ಏಕಾಗ್ರತೆಯಿಂದ ಆಲೋಚಿಸಲಾರದು. ಸ್ಥಿರವಾಗದು. ಆಗ ಮನಸ್ಸಿನಮೇಲೆ ಪರಿಣಾಮವನ್ನುಂಟುಮಾಡಬೇಕಾದರೆ ಕಷ್ಟ.

ಮಕ್ಕಳ ನಂಬಿಕೆ ಎಷ್ಟು ಸರಳ ಮತ್ತು ಸ್ಥಿರವಾದುದು. ಇತರರಿಂದ ಕೇಳುವುದನ್ನು ನಂಬಿ ಅದರಂತೆ ಮಾಡಲು ಯತ್ನಿಸುವರು. ಚಂಚಲವಾಗದ ತಮ್ಮ ಮನಸ್ಸನ್ನು ಪ್ರಯೋಗಿಸಿದಾಗಲೆಲ್ಲ ಜಯಹೊಂದುವರು. ವಯಸ್ಸಾದಂತೆ ಅಪನಂಬಿಕೆ ಬರುವ ಸ್ವಭಾವವಿದೆ. ವಯಸ್ಸಾದಂತೆ ಎಲ್ಲವನ್ನೂ ಅನುಮಾನಿಸುವರು. ಕೊನೆಗೆ ಯಾವುದನ್ನೂ ನಂಬಲಾರದ

ಒಂದು ಸ್ಥಿತಿಗೆ ಬರುವರು. ಅದಕ್ಕೇ ನೀವಿನ್ನೂ ಸಣ್ಣವರಾಗಿರುವಾಗ ಏನುಮಾಡಬೇಕೆಂದು ಬಯಸುವಿರೋ ಅದನ್ನು ಈಗಲೇ ಮಾಡಿ.

ಸಣ್ಣ ಹುಡುಗರಿಗೇ ಪ್ರತ್ಯೇಕವಾಗಿ ತ್ಯಾಗಜೀವನವನ್ನು ನಮ್ಮ ಗುರುದೇವರು ಬೋಧಿಸುತ್ತಿದ್ದುದನ್ನು ಕಂಡೆವು. ಜೀವನದ ಮುಖ್ಯ ಗುರಿಯೇ ಭಗವಂತನ ಸಾಕ್ಷಾತ್ಕಾರ ಎಂಬುದನ್ನು ಮನಮುಟ್ಟುವಂತೆ ಅವರಿಗೆ ಹೇಳುತ್ತಿದ್ದರು. ತಮ್ಮ ಆದರ್ಶವನ್ನು ಪೂರ್ಣ ಸ್ವೀಕರಿಸಲು ಸಣ್ಣವರಿಗೆ ಮಾತ್ರ ಸಾಧ್ಯವೆಂದು ಅವರಿಗೆ ಗೊತ್ತಿತ್ತು. ಅದೃಷ್ಟವಶಾತ್ ನೀವೆಲ್ಲಾ ಇನ್ನೂ ಸಣ್ಣವರು. ಮನಸ್ಸು ಪ್ರಾಪಂಚಿಕ ಆಸೆಯಿಂದ ಮಲಿನವಾಗಿಲ್ಲ. ನಿಮ್ಮ ಆಸೆಯನ್ನೆಲ್ಲ ತ್ಯಜಿಸಿ ಬಾಳನ್ನೇ ಭಗವಂತನಿಗೆ ಅರ್ಪಿಸಿ. ದೇವರ ಆನಂದ ಮತ್ತು ಪ್ರಪಂಚದ ಭೋಗ ಎರಡನ್ನೂ ಒಟ್ಟಿಗೇ ಪಡೆಯಲಾರಿರಿ. ಒಂದನ್ನು ಬಿಡದೆ ಮತ್ತೊಂದು ದೊರಕುವುದಿಲ್ಲ. ಉತ್ತಮ ಜೀವನದ ಮೇಲೆ ಆಸೆ ಹುಟ್ಟುವವರೆಗೆ ಕೀಳುಜೀವನವನ್ನು ನೀವು ಬಿಡಲಾರಿರಿ.

ಸಾಧ್ಯವಾದಷ್ಟು ಭಗವದ್ವಿಷಯಗಳಿಂದ ನಿಮ್ಮ ಮನಸ್ಸನ್ನು ತುಂಬಲು ಇದೇ ಸಕಾಲ. ಅವನನ್ನು ನಿಮ್ಮವನನ್ನಾಗಿ ಮಾಡಿಕೊಳ್ಳಿ. "ಅವನೇ ನನ್ನ ಸರ್ವಸ್ವ." ಈ ಭಾವನೆ ನಿನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತರೆ ನಿನ್ನ ದುಃಖವೆಲ್ಲ ಕೊನೆಗಾಣುವುದು. ಆಗ ಯಾರೂ ನಿಮಗೆ ಈಗ ಅಥವಾ ನಂತರ ತೊಂದರೆ ಕೊಡಲಾರರು.

ಕಲ್ಲುಸಕ್ಕರೆ ಪಾನಕ ರುಚಿ ನೋಡಿದವನು ಜಿನಗುಬೆಲ್ಲವನ್ನು ಆಶಿಸುವನೆ? ಭಗವದಾನಂದದ ಸವಿ ಸ್ವಲ್ಪ ಸಿಕ್ಕಿದರೆ ಪ್ರಾಪಂಚಿಕ ಸುಖ ಭೋಗ ಸಪ್ಪೆಯಾಗುವುದು. ಎಲ್ಲಾ ಪ್ರಾಪಂಚಿಕ ಸುಖಭೋಗಗಳೂ, ರುಚಿ ಇಲ್ಲದೇ ಇರುವುದು ಮಾತ್ರವಲ್ಲ, ಕಹಿಯಾಗುವುದು. ನಾನು ನಿಮಗೆ ಹೇಳಬಯಸುವುದು ಇದು—ತನುಮನವನ್ನು ಭಗವಂತನಿಗೆ ಅರ್ಪಿಸಿ, ಅವನಿಚ್ಛೆ ತೋರಿದಂತೆ ಮಾಡಲಿ.

## ೧೧

## ಬ್ರಹ್ಮಚರ್ಯ

ಸ್ವಾಮಿಜಿ : ಸಾಧನೆಯಲ್ಲಿ ಒಂದೇ ನಿಯಮವನ್ನು ಎಲ್ಲರಿಗೂ ಅನ್ವಯಿಸುವುದಕ್ಕೆ ಆಗುವುದಿಲ್ಲ. ಪ್ರತಿಯೊಬ್ಬನ ಸ್ವಭಾವ ಗೊತ್ತಾದ ಮೇಲೆ ಮಾತ್ರ ಅವನಿಗೆ ಸಲಹೆಯನ್ನು ಕೊಡಬಹುದು. ಸಲಹೆ ಅವನ ಸ್ವಭಾವಕ್ಕೆ ವಿರುದ್ಧವಾಗಿದ್ದರೆ ಅವನಿಗೆ ಅದರಿಂದ ಪ್ರಯೋಜನವಿಲ್ಲ.

ಜೊತೆಗೆ ಅಪಾಯ ಪರಿಣಾಮಗಳೂ ಆಗಬಹುದು. ಶಿಷ್ಯನ ನಡತೆ ಮತ್ತು ಸ್ವಭಾವವನ್ನು ಚೆನ್ನಾಗಿ ಪರೀಕ್ಷಿಸಿ ಅವರಿಗೆ ಸೂಕ್ತವಾಗುವ ಸಲಹೆ ಕೊಡಬೇಕು.

ಶಿಷ್ಯ ಯಾವ ಮಾರ್ಗವನ್ನು ಅನುಸರಿಸಬೇಕು ಎಂಬ ವಿಚಾರವಾಗಿ ಎಲ್ಲರಿಗೂ ಅನ್ವಯಿಸುವ ಸಾಮಾನ್ಯ ಒಂದೆರಡು ನಿಯಮವಲ್ಲದೆ ಬೇರೇನನ್ನೂ ಹೇಳಲು ಆಗುವುದಿಲ್ಲ. ಶ್ರೀರಾಮಕೃಷ್ಣರು ಪ್ರತಿಯೊಬ್ಬ ಶಿಷ್ಯನನ್ನೂ ಬೇರೆ ಕರೆದು ರಹಸ್ಯವಾಗಿ ಉಪದೇಶಮಾಡುತ್ತಿದ್ದುದನ್ನು ನೋಡಿರುವೆನು. ಸಾಧನೆ ವಿಚಾರವಾಗಿ ನೀನು ಗುರುಗಳನ್ನು ಏನನ್ನಾದರೂ ಕೇಳಬೇಕಾದರೆ ಏಕಾಂತದಲ್ಲಿ ಕೇಳಬೇಕು. ಸಾಧಾರಣವಾಗಿ ಕೆಲವು ನಿಯಮ ಎಲ್ಲಾ ಸಾಧಕರಿಗೂ ಅನ್ವಯಿಸುತ್ತದೆ. ಮೊದಲು ದೇವರಲ್ಲಿ ಶ್ರದ್ಧೆ ಇಡಬೇಕು. ಭಗವಂತನ ಸಾಕ್ಷಾತ್ಕಾರವಾಗಿ ಅವನ ಕೃಪೆ ಪಡೆದಮೇಲೆ ನಿನ್ನ ಜೀವನದ ಸಮಸ್ಯೆಗಳೆಲ್ಲ ಬಗೆಹರಿಯುವುವು. ಈ ಜೀವನವನ್ನು ಏತಕ್ಕಾಗಿ ಎತ್ತಿದೆಯೊ ಅದರ ಗುರಿಮುಟ್ಟುವೆ. ಆನಂದದ ಸವಿ ದೊರೆತರೆ ನಾವೂ ಅಮರರಾಗುವೆವು ಎಂಬ ನಂಬಿಕೆ ಇರಬೇಕು.

ನಂತರವೆ ಬ್ರಹ್ಮಚರ್ಯ. ನೈಷ್ಠಿಕ ಬ್ರಹ್ಮಚರ್ಯವಿಲ್ಲದೆ ಯಾವ ಭವ್ಯ ಆದರ್ಶವನ್ನೂ ಸಾಧಿಸಲಾರೆವು. ದೇಹ, ಮೆದುಳು, ಮನಸ್ಸು ಚೆನ್ನಾಗಿ ದೃಢವಾಗಿ ಬೆಳೆಯಬೇಕಾದರೆ ಬ್ರಹ್ಮಚರ್ಯ ಆವಶ್ಯಕ. ಯಾರು ನಿಜವಾಗಿ ಬ್ರಹ್ಮಚರ್ಯವನ್ನು ಸಾಧಿಸುವರೋ ಅವರಿಗೆ ಒಳ್ಳೆಯ ಜ್ಞಾಪಕಶಕ್ತಿ ಮತ್ತು ಒಂದು ವಿಷಯವನ್ನು ತಿಳಿದುಹೇಳುವ ಬುದ್ಧಿ ಬರುವುದು. ಬ್ರಹ್ಮಚರ್ಯದಿಂದ ಒಂದು ಪ್ರತ್ಯೇಕ ನಾಡಿಯೇ ದೇಹದಲ್ಲಿ ವಿಕಾಸವಾಗಿ ಈ ಶಕ್ತಿಯನ್ನು ಒದಗಿಸುವುದು. ನಮ್ಮ ಹಿಂದಿನ ಗುರುಗಳು ಬ್ರಹ್ಮಚರ್ಯಕ್ಕೆ ಏತಕ್ಕೆ ಅಷ್ಟು ಪ್ರಾಮುಖ್ಯತೆ ಕೊಡುತ್ತಿದ್ದರು ಗೊತ್ತಿಲ್ಲವೆ? ಇಲ್ಲಿ ಆತ ಸೋತರೆ ಆತ ಮತ್ತೇನನ್ನೂ ಸಾಧಿಸಲಾರ. ಬ್ರಹ್ಮಚಾರಿಗೆ ಶಕ್ತಿ ವ್ಯಯವಾಗುವುದಿಲ್ಲ. ಅವನು ಜಟ್ಟಿಯಂತೆ ಕಾಣದೆ ಇರಬಹುದು. ಆದರೆ ಅತೀಂದ್ರಿಯ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ಅವನ ಮೆದುಳು ಅತಿ ಸೂಕ್ಷ್ಮವಾಗುವುದು.

ಬ್ರಹ್ಮಚಾರಿ ಪಾಲಿಸಬೇಕಾದ ಕೆಲವು ನಿಯಮಗಳಿವೆ. ಉದ್ರೇಕಿಸುವ ಆಹಾರ, ಹೆಚ್ಚುನಿದ್ರೆ, ಹೆಚ್ಚು ಅಂಗಸಾಧನೆ, ಸೋಮಾರಿತನ, ಕೆಟ್ಟಸಹವಾಸ ಮತ್ತು ಸಂಭಾಷಣೆ ಇವನ್ನು ತೊರೆಯಬೇಕು. ಕೆಲಸಕ್ಕೆ

ಬಾರದ ಹರಟೆಯಲ್ಲಿ ಮಗ್ನನಾದರೆ ಮೆದುಳು ಉದ್ರೇಕಗೊಳ್ಳುವುದು. ನಿನ್ನ ಆಲೋಚನೆಯನ್ನು ನಿಗ್ರಹಿಸಲಾರೆ. ಸರಿಯಾಗಿ ನಿದ್ರೆ ಬರದೆ ಇರುವುದು ಮತ್ತು ಇನ್ನೂ ಇತರ ತೊಂದರೆ ಪ್ರಾಪ್ತವಾಗುವುದು.

ನಾಲಿಗೆಯನ್ನು ನಿಗ್ರಹಿಸುವುದೂ ಆವಶ್ಯಕ. ಇಲ್ಲದೇಇದ್ದರೆ ಹಲವು ತೊಂದರೆಗೆ ಈಡಾಗುವೆ. ಶ್ರೀರಾಮಕೃಷ್ಣರು ನಿನ್ನ ತಲೆ ಮತ್ತು ಹೊಟ್ಟೆ ತಂಪಗೆ ಇಡು ಎನ್ನುತ್ತಿದ್ದರು. ಅಂದರೆ ನಿಮ್ಮ ಹೊಟ್ಟೆ ಮತ್ತು ತಲೆ ಸರಿಯಾಗಿದ್ದರೆ ಚೆನ್ನಾಗಿ ಕೆಲಸಮಾಡಬಹುದು. ನಾಲಿಗೆಯಮೇಲೆ ಹದ್ದಿಲ್ಲದ ಹೊಟ್ಟೆಬಾಕ, ಮನಸ್ಸು ಮತ್ತು ದೇಹವನ್ನು ಕೆಡಿಸಿಕೊಳ್ಳುವನು. ಈರುಳ್ಳಿ, ಬೆಳ್ಳುಳ್ಳಿ, ಮೆಣಸಿನಕಾಯಿ ಮುಂತಾದುವನ್ನು ಹೆಚ್ಚು ತಿಂದರೆ ದೇಹ ಉದ್ರೇಕವಾಗಿ ಮನೋನಿಗ್ರಹ ಕಷ್ಟವಾಗುವುದು. ಯಾರು ಸಾಧನೆಮಾಡಬೇಕೆಂದು ಬಯಸುವವರೋ ಅವರು ತಾವು ಏನನ್ನು ತಿನ್ನುತ್ತಾರೋ, ಕುಡಿಯುತ್ತಾರೋ ಅದನ್ನು ಗಮನಿಸಬೇಕು ಶಕ್ತಿವರ್ಧಕ ಮತ್ತು ಸುಲಭವಾಗಿ ಜೀರ್ಣವಾಗುವ ಆಹಾರವನ್ನು ಮಾತ್ರ ತೆಗೆದುಕೊಳ್ಳುವುದು ಒಳ್ಳೆಯದು. ಅಜೀರ್ಣವಾಗುವವರೆಗೆ ತಿಂದರೆ ಪ್ರಯೋಜನವಿಲ್ಲ.

ಆಹಾರದ ವಿಷಯದಲ್ಲಿ ಯಾವ ಒಂದು ನಿಯಮವನ್ನು ಒತ್ತಿ ಹೇಳುವುದಕ್ಕೆ ಆಗುವುದಿಲ್ಲ. ಕೆಲವರಿಗೆ ಮೀನುಮಾಂಸ ಚೆನ್ನಾಗಿ ಒಗ್ಗುವುದು, ಮತ್ತೆ ಕೆಲವರಿಗೆ ಅದರಿಂದ ಅಪಾಯ. ಪ್ರತಿಯೊಬ್ಬನೂ ತನ್ನ ಸ್ವಂತ ಅನುಭವದಿಂದಲೇ ಯಾವ ಆಹಾರ ತನಗೆ ಒಗ್ಗುವುದೆಂಬುದನ್ನು ಕಂಡುಹಿಡಿದುಕೊಳ್ಳಬೇಕು.

ಆತ್ಮದ ನಿಜಸ್ವರೂಪವನ್ನು ತಿಳಿದುಕೊಳ್ಳುವುದಕ್ಕಾಗಿ ದೇಹ ಆರೋಗ್ಯದಲ್ಲಿರಬೇಕು ಎಂಬುದಕ್ಕಾಗಿ ಮಾತ್ರ ನಾವು ಆಹಾರ ತೆಗೆದುಕೊಳ್ಳಬೇಕು. ಶಾಸ್ತ್ರ "ಶರೀರಮಾದ್ಯಂ ಖಲು ಧರ್ಮಸಾಧನಂ" ಎಂದು ಹೇಳುವುದು. ಎಲ್ಲಾ ಧರ್ಮಸಾಧನೆಗೆ ಶರೀರ ಮುಖ್ಯ. ಅಂದರೆ ಹಗಲು ರಾತ್ರೆ ತನ್ನ ದೇಹವನ್ನೇ ಕುರಿತು ಆಲೋಚಿಸಬೇಕಾದುದು ಅಲ್ಲ, ತನ್ನ ದೇಹಪಟುತ್ವ ಕುಗ್ಗದಂತೆ ನೋಡಿಕೊಳ್ಳಬೇಕು. ಸೋಮಾರಿತನಕ್ಕೆ ಕಾರಣವಾಗದ ಶುದ್ಧವಾದ ಆಹಾರವನ್ನು ಸೇವಿಸಬೇಕು.

ಶ್ರೀರಾಮಕೃಷ್ಣರು "ಹಗಲು ನೀನು ಎಷ್ಟು ಬೇಕಾದರೂ ತಿನ್ನಬಹುದು. ಆದರೆ ರಾತ್ರಿ ಮಿತವಾಗಿ ಸೇವಿಸಬೇಕು" ಎನ್ನುತ್ತಿದ್ದರು. ರಾತ್ರಿ ಕಡಿಮೆ ಆಹಾರ ಸೇವಿಸಿದರೆ ನಿನ್ನ ದೇಹ ಹಗುರವಾಗುವುದು.

ಮನಸ್ಸನ್ನು ಸುಲಭವಾಗಿ ಏಕಾಗ್ರಮಾಡಬಹುದು. ಇಲ್ಲದೇ ಇದ್ದರೆ ಮಲಗಬೇಕಾಗುವುದು ಅಥವಾ ಸೋಮಾರಿಯಾಗಬೇಕಾಗುವುದು. ರಾತ್ರಿ ನಿದ್ರೆಯಲ್ಲಿ ಕಳೆಯುವೆಯೊ ಅಥವಾ ಧ್ಯಾನದಲ್ಲಿ ಕಳೆಯುವೆಯೊ? ಹಗಲಿನಲ್ಲಿ ಎಷ್ಟೋ ಆಕರ್ಷಣೆಗಳಿವೆ. ಧ್ಯಾನ ಸಾಧ್ಯವಿಲ್ಲ. ರಾತ್ರಿ ಎಲ್ಲರೂ ನಿದ್ರೆಗೆ ಹೋಗುವರು. ಪ್ರಕೃತಿಯೇ ಮೌನವಾಗಿ ಶಾಂತವಾಗಿರುವುದು. ಭಗವಂತನನ್ನು ಸಾಧಿಸುವುದಕ್ಕೆ ಸಾಧಕನಿಗೆ ಇದೇ ಒಳ್ಳೆಯ ಸಮಯ. ಅರ್ಧ ರಾತ್ರಿಯಲ್ಲಿ ಮನಸ್ಸನ್ನು ಸುಲಭವಾಗಿ ಏಕಾಗ್ರಮಾಡಬಹುದು.

ತೋರಿಕೆಗಾಗಿ ಅಥವಾ ಎಲ್ಲರಿಗೂ ಕಾಣುವಂತೆ ಸಾಧನೆಮಾಡಕೂಡದು. ಇತರರೆದುರಿಗೆ ಮಾಡಿದರೆ ಅದರಿಂದ ನಿನಗೇ ತೊಂದರೆ. ಅಣಕಿಸುವರು, ಎಷ್ಟೋ ಬುದ್ಧಿವಾದ ಕೊಡುವರು; ನಿನ್ನ ಪ್ರಕೃತಿಗೆ ವಿರೋಧವಾದ ಸಲಹೆಕೊಡುವರು. ಇದರ ಪರಿಣಾಮವಾಗಿ ಎಷ್ಟೋ ಸಂಶಯ ಮನಸ್ಸಿನಲ್ಲಿ ಎದ್ದು ನಿನ್ನ ಆಧ್ಯಾತ್ಮಿಕ ಶ್ರೇಯಸ್ಸಿಗೆ ಆತಂಕವಾಗುವುದು. ಆದರ್ಶಸಾಧಕ, ಸೊಳ್ಳೆಪರದೆ ಕೆಳಗೆ ಇಳೀಬಿಟ್ಟು ನಿದ್ದೆಗೆ ಹೋಗುವನು. ಎಲ್ಲರೂ ಅವನು ನಿದ್ದೆಮಾಡುತ್ತಿರುವನು ಎಂದು ಭಾವಿಸುವರು. ಆದರೆ ಈತ ರಾತ್ರಿಯೆಲ್ಲ ಧ್ಯಾನದಲ್ಲಿ ಕಳೆಯುವನು.

ಇನ್ನೂ ಚಿಕ್ಕವರಾಗಿರುವಾಗ ಭಗವದಾನಂದದ ರುಚಿಯನ್ನು ಪಡೆಯಲು ಯತ್ನಿಸಿ. ಒಮ್ಮೆ ಇದು ದೊರೆತರೆ ನಂತರ ನೀವು ಸಾಧನೆಯನ್ನು ಬಿಡುವುದೇ ಇಲ್ಲ. ಪ್ರಾಣಹೋದರೂ ಸಾಧನೆ ಮಾಡುವಿರಿ. ರಾತ್ರಿ ಯಾರಿಗೆ ನಿದ್ದೆ ಜಾಸ್ತಿಯೋ ಅಂತಹವರು ಹಗಲು ಹೊತ್ತು ಮಲಗಿ ರಾತ್ರಿ ಸಾಧನೆಯಲ್ಲಿ ಕಳೆಯಬಹುದು. ಧ್ಯಾನಕ್ಕೆ ಒಳ್ಳೆಯ ಕಾಲವೆ ಬೆಳಗಿನ ಝಾವ, ಸಂಜೆ ಮತ್ತು ಅರ್ಧ ರಾತ್ರಿ. ಅನೇಕ ವೇಳೆ ಜನರು ಇಂತಹ ಸದವಕಾಶವನ್ನು ವ್ಯರ್ಥಮಾಡಿಕೊಳ್ಳುವರು.

ಶ್ರೀರಾಮಕೃಷ್ಣರು ರಾತ್ರಿ ಹೊತ್ತು ನಿದ್ದೆಮಾಡುತ್ತಿರಲಿಲ್ಲ. ಅವರ ಹತ್ತಿರ ಇದ್ದ ಹುಡುಗರಿಗೂ ಹೆಚ್ಚು ಹೊತ್ತು ಮಲಗಲು ಅವಕಾಶ ಕೊಡುತ್ತಿರಲಿಲ್ಲ. ಉಳಿದವರು ಮಲಗಲು ಹೋದಮೇಲೆ, ತಮ್ಮ ಶಿಷ್ಯರನ್ನು ಎಬ್ಬಿಸಿ, ಸಲಹೆಕೊಟ್ಟು ಧ್ಯಾನಕ್ಕೆ ಪಂಚವಟಿ, ಕಾಳಿಕಾದೇವಾಲಯ, ಶಿವಮಂದಿರ ಮುಂತಾದಕಡೆ ಕಳುಹಿಸುತ್ತಿದ್ದರು. ರಾತ್ರಿ ಸಾಧನೆಯಲ್ಲಿ ಕಳೆದು ಹಗಲು ಮಲಗುತ್ತಿದ್ದರು. ಶ್ರೀರಾಮಕೃಷ್ಣರು ಶಿಷ್ಯರಿಂದ ಸಾಧನೆ ಮಾಡಿಸುತ್ತಿದ್ದ ರೀತಿ ಇದು. ಮೂರು ಬಗೆ ಜನ ರಾತ್ರಿ ನಿದ್ರಿಸುವುದಿಲ್ಲ, "ಯೋಗಿ, ಭೋಗಿ, ರೋಗಿ." ನೀವೆಲ್ಲಾ ಯೋಗಿಗಳು. ರಾತ್ರಿಯನ್ನು ವೃಥಾ ನಿದ್ರೆಯಲ್ಲೆ ಕಳೆಯಬೇಡಿ.

## ೧೨
## ಸಾಧುಸಂಗ

ಸ್ವಾಮಿಜಿ : ಧ್ಯಾನಸಿದ್ಧನಾದಮೇಲೆ ಅದರಿಂದ ಬರುವ ಆನಂದ ಎಷ್ಟು ಮಧುರವಾದುದೆಂಬುದು ನಂತರ ಗೊತ್ತಾಗುವುದು. ಹಗಲು ರಾತ್ರಿ ಕಳೆದುಹೋಗುವುದು. ಅನಂತಾನಂದದಮೇಲೆ ತೇಲುತ್ತಿರುವಂತೆ ಭಾಸವಾಗುವುದು. ಎಲ್ಲರಿಗೂ ನಿಮ್ಮ ಅನುಭವವನ್ನು ಹೇಳಬೇಡಿ. ನಿಮ್ಮ ಅಭಿವೃದ್ಧಿಗೆ ಅದು ಆತಂಕವಾಗುವುದು. ನಿಮ್ಮ ಸ್ವಭಾವ ಮತ್ತು ನಡತೆ ಇರುವವರೊಂದಿಗೆ ನಿಮ್ಮ ನಿಮ್ಮ ಅನುಭವಗಳನ್ನು ಹೇಳಿಕೊಂಡರೆ ಅದರಿಂದ ಸಹಾಯವಾಗಬಹುದು. ನೀವಿಬ್ಬರೂ ಒಂದೇ ಮಾರ್ಗದಲ್ಲಿ ಪಥಿಕರು. ಬಹುಶಃ ನಿನ್ನ ಸ್ನೇಹಿತ ಆಗಲೇ ಆ ದಾರಿಯಲ್ಲಿ ಮುಂದೆ ನಡೆದುಹೋಗಿರಬಹುದು. ಅಲ್ಲಿ ಬರುವ ತೊಂದರೆ ಆತಂಕಗಳು ಅವನಿಗೆ ಅರಿವಾಗಿರಬಹುದು. ಅದರ ಅನುಭವದಿಂದ ಬುದ್ಧಿ ಕಲಿತರೆ ಅದೇ ಆ ತೊಂದರೆ ಆತಂಕಗಳಿಂದ ನೀನು ಪಾರಾಗಬಹುದು.

ಸತ್ಸಂಗದಿಂದ ಏನು ಪ್ರಯೋಜನ? ಇದರಿಂದ ಸಾಧಕರಿಗೆ ಬಹಳ ಸಹಾಯವಾಗುವುದು. ನೀನುಒಂದು ಹೊಸ ಸ್ಥಳಕ್ಕೆ ಹೋದರೆ ಅಲ್ಲಿ ಒಬ್ಬ ಒಳ್ಳೆಯ ದಾರಿ ತೋರಿಸುವವನು ದೊರೆತರೆ, ನೋಡಬೇಕಾದುದೆಲ್ಲವನ್ನೂ ಅತ್ಯಲ್ಪ ಕಾಲದಲ್ಲೇ ನೋಡಬಹುದು. ಅದೂ ಅಲ್ಲದೆ ಅಪರಿಚಿತರಿಗೆ ಬರಬಹುದಾದ ಕಷ್ಟನಷ್ಟಗಳಿಂದಲೂ ಪಾರಾಗಬಹುದು. ಇದರಿಂದ ಮುಂದುವರಿದ ಸಾಧಕರಸಹವಾಸದಿಂದ ಎಷ್ಟೋ ಅಮೂಲ್ಯವಾದ ಸಲಹೆಗಳನ್ನು ಪಡೆಯಬಹುದು. ನಿಮ್ಮ ಸಾಧನೆ ಸುಗಮವಾಗುವುದು. ಸಾಧಾರಣ ಮನುಷ್ಯನ ಬುದ್ಧಿ ಬಹಳ ದೂರ ಹೋಗುವುದಿಲ್ಲ. ನಮ್ಮ ಆಯುಸ್ಸು ಕಡಿಮೆ, ಎಷ್ಟೊ ಕೆಲಸಗಳನ್ನು ಮಾಡಬೇಕಾಗಿದೆ. ಅತ್ಯಲ್ಪಕಾಲವಲ್ಲಿ ನಿಮ್ಮ ಕೆಲಸವನ್ನು ಹೇಗೆ ಚೆನ್ನಾಗಿ ಮಾಡಬಹುದೆಂಬುದನ್ನು ಕಂಡುಹಿಡಿಯಬೇಕು. ಆದಕಾರಣವೇ ಸಾಧುಸಂಗದ ಅವಶ್ಯಕತೆ.

ನಿಮ್ಮ ಜೀವನ ಇನ್ನು ಕೆಲವು ವರುಷಗಳಾದಮೇಲೊ ಅಥವಾ ಇಂದೋ ಕೊನೆಗಾಣಬಹುದು. ಅಂತ್ಯ ಎಂದು ಬರುವುದೋ ಯಾರಿಗೂ ಗೊತ್ತಿಲ್ಲ. ಸಾಧ್ಯವಾದಷ್ಟು ಬೇಗ ಪಯಣಕ್ಕೆ ಸಿದ್ಧವಾಗಿರುವುದು ಮೇಲು. ತಿಳಿಯದ ಹೊಸಜಾಗಕ್ಕೆ ಬರಿಕೈಯಲ್ಲಿ ಹೋದರೆ ಬಹಳ ಕಷ್ಟ. ಜೀವನ ಮರಣಕ್ಕೆ ಕೊಂಡೊಯ್ಯಲೇಬೇಕು. ಮರಣವೆಂದರೆ ತಿಳಿಯದ ಹೊಸ ಜಾಗಕ್ಕೆ ಹೋಗುವಂತೆ; ಪಯಣಕ್ಕೆ ಸಿದ್ಧರಾಗಿರಬೇಕು. ಪ್ರಪಂಚದ

ಕರ್ತವ್ಯವನ್ನೆಲ್ಲಾ ಮಾಡಿ ಆ ಕೊನೆಯ ಕರೆಗೆ ಸಿದ್ಧರಾಗಿರಿ. ಆಗ ನಗುತ್ತ ಈ ಪ್ರಪಂಚವನ್ನು ತೊರೆಯಬೇಕು. ನಿಮ್ಮ ಕೆಲಸವನ್ನೆಲ್ಲಾ ಮಾಡಿದ್ದರೆ ಯಾವ ಅಂಜಿಕೆಯೂ ಇಲ್ಲ. ಪಯಣಕ್ಕೆ ಅಣಿಯಾಗಿರುವೆ ಎಂದು ನಿನಗೆ ಗೊತ್ತಿರುವುದು.

ಮಕ್ಕಳು ಕಂಬ ಸುತ್ತುವಾಗ ಅದನ್ನು ಬಿಗಿಯಾಗಿ ಹಿಡಿದುಕೊಂಡಿರುವುದನ್ನು ನೀವು ನೋಡಿರುವಿರಿ. ನೀವೂ ಕೂಡ ಜಗದ ಕಂಬವಾದ ದೇವರನ್ನು ಬಿಗಿಯಾಗಿ ಹಿಡಿದುಕೊಳ್ಳಬೇಕು. ಆತ್ಮಶ್ರದ್ಧೆ ಇರಲಿ. "ನಾನು ಮನುಷ್ಯ ಏನನ್ನು ಬೇಕಾದರೂ ಮಾಡಬಲ್ಲೆ" ಎಂದು ನಂಬಿ. ಇಂತಹ ಶ್ರದ್ಧೆಯಿಂದ ಮುಂದುವರಿಯಿರಿ. ಜೀವನದ ಗುರಿ ಸೇರಿ ಧನ್ಯರಾಗುವಿರಿ.

ಅಂಜಿಕೆಯೆ ಪರಮ ಪಾಪ. ಎಲ್ಲಾ ಅಂಜಿಕೆ ದುರ್ಬಲತೆಯನ್ನು ಮನಸ್ಸಿನಿಂದ ಹೊಡೆದೋಡಿಸಿ. ಭಗವಂತನನ್ನು ನೋಡಬೇಕೆಂಬ ಆಸೆ ಜಾಗ್ರತವಾಗಿರುವಾಗ, ಆಧ್ಯಾತ್ಮಿಕ ಜೀವನವನ್ನು ನಡೆಸಲು ನಿನಗೆ ಅವಕಾಶವಿರುವಾಗ ನಿನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಭಗವದಾನಂದದ ಸವಿಯನ್ನು ನೋಡಿ. ಜನನ-ಮರಣಗಳು ದುಃಖದಿಂದ ತುಂಬಿದೆ. ಈ ಜನ್ಮದಲ್ಲೂ ಆದಷ್ಟು ಪ್ರಯೋಜನ ಪಡೆ. ಸಂಸಾರದಿಂದ ಪಾರಾಗಿ ಸಾಯುಜ್ಯಪದವಿಯನ್ನು ಪಡೆ.

ದೇವರಮೇಲೆ ಮನಸ್ಸನ್ನು ಇಡದೆಇದ್ದರೆ ಪರಿಶುದ್ಧರಾಗಿರಲು ಸಾಧ್ಯವಿಲ್ಲ. ಮಹಾಮಾಯೆ ಹಲವು ವಿಧದಲ್ಲಿ ಆಡುವಳು. ಅವಳು ಸೃಷ್ಟಿಸುವ ಮಹಾಪ್ರಲೋಭನೆಯ ಆಕರ್ಷಣೆಗೆ ಬೀಳದೆ ಇರುವುದು ಬಹಳ ಕಷ್ಟ. ಕಾಮ, ಕ್ರೋಧ, ಲೋಭ, ಇವುಗಳನ್ನು ಜಯಿಸುವುದು ಬಹಳ ಕಷ್ಟ. ಇದರಿಂದ ಪಾರಾಗುವುದು ಮಕ್ಕಳಾಟವಲ್ಲ. ಮತ್ಯಾವುದರ ಸಹಾಯದಿಂದಲೂ ಅಲ್ಲ, ಭಗವಂತನ ಶಕ್ತಿಯಿಂದ ಮಾತ್ರ ಮಹಾಮಾಯೆಯ ಮೋಹದಿಂದ ಪಾರಾಗಿ ಮುಕ್ತರಾಗಲು ಸಾಧ್ಯ.

ಅದಕ್ಕೆ ಭಗವತ್‌ಶಕ್ತಿಯನ್ನು ಹೆಚ್ಚಾಗಿ ಗಳಿಸಿ ದೃಢರಾಗಿ ಎನ್ನುವುದು. ಅನಂತರ ಅವನ ಇಚ್ಛೆಯಂತೆ ನಿಮ್ಮ ಜೀವನವನ್ನು ನಡೆಸಬಹುದು. ಸಾಧಾರಣ ಮನುಷ್ಯರು ಕೇವಲ ತಮ್ಮ ಸ್ವಂತ ಪ್ರಯತ್ನದಿಂದಲೇ ದೇವರನ್ನು ತಿಳಿದುಕೊಳ್ಳುವುದು ಅಸಾಧ್ಯ. ಭಗವಂತನು ಯಾರಮೇಲೆ ತನ್ನ ಅಸೀಮ ಕೃಪೆಯನ್ನು ತೋರುವನೋ ಅವನುಮಾತ್ರ ದೇವರನ್ನು ತಿಳಿದುಕೊಳ್ಳಬಲ್ಲ. ಅಂತಹ ಅದೃಷ್ಟಶಾಲಿಗಳು ಮಾತ್ರ ಸಂಸಾರದಿಂದ ಪಾರಾಗಿ ಮುಕ್ತಿಯನ್ನು ಪಡೆಯಬಹುದು.

ಸಾಧನೆಗೆ ಒಂದು ನಿಷ್ಠೆ ಇರಬೇಕು. ಇದು ಬಹಳ ಮುಖ್ಯ ಇದಿಲ್ಲದೆ ಇದ್ದರೆ ನಾವೇನನ್ನೂ ಸಾಧಿಸಲು ಆಗುವುದಿಲ್ಲ. ನಿಮ್ಮ ನಿಷ್ಠೆ ಹೇಗಿರಬೇಕು? ಎಲ್ಲಿ ಎಂತಹ ಸನ್ನಿವೇಶದಲ್ಲಿದ್ದರೂ ಯಾವ ನಿಯಮ ವನ್ನು ನೀನಿಟ್ಟುಕೊಂಡಿರುವೆಯೋ ಅದನ್ನು ಏನಾದರೂ ಆಗಲಿ ಪರಿ ಪಾಲಿಸಬೇಕು. ನಿನ್ನ ಧ್ಯಾನ, ಅಧ್ಯಯನ, ಮನನ, ನಿದ್ರೆ, ಇದಕ್ಕೆ ನಿಯಮಿತ ಕಾಲವಿರಬೇಕು. ಅಕ್ರಮ ಜೀವನವನ್ನು ನೀನು ನಡೆಸಿದರೆ ನೀನು ಯಾವುದರಲ್ಲೂ ಜಯಿಸುವುದಿಲ್ಲ. ಕ್ರಮಬದ್ಧ ಜೀವನದಿಂದಮಾತ್ರ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗೆ ಸಾಧ್ಯ. ಗಡಿಯಾರ ಕೆಟ್ಟು ಹೋದರೆ ಅದನ್ನು ರಿಪೇರಿ ಮಾಡುವವನು ಸರಿಮಾಡುತ್ತಾನೆ. ಆಗ ಅದು ಸರಿಯಾದ ಕಾಲವನ್ನು ತೋರುವುದು. ಇದರಂತೆಯೇ ಮನಸ್ಸೂ ಕೂಡ. ಹಲವು ಕಾರಣಗಳಿಂದ ಮನಸ್ಸು ಈಗ ಅಕ್ರಮವಾಗಿದೆ. ಸತ್ ಪುರುಷರ ಸಹವಾಸದಿಂದ ನಿನ್ನ ಮನಸ್ಸು ಸರಿಯಾಗುವುದು. ಮಹಾ ಪುರುಷರ ಸಲಹೆಯಂತೆ ಜೀವನವನ್ನು ತಿದ್ದಿಕೊಳ್ಳಲು ಯತ್ನಿಸಿದರೆ ಅವನತಿ ಮತ್ತು ಪ್ರಲೋಭನೆಗಳಿಂದ ಸುಲಭವಾಗಿ ಪಾರಾಗಬಹುದು. ಅವರ ದಾರಿಯನ್ನು ಅನುಸರಿಸಿದರೆ ನೀನೂ ಅವರು ಸೇರಿದ ಗುರಿಯನ್ನೇ ಸೇರುವೆ. ನಿನ್ನ ಜೀವನೋದ್ದೇಶವನ್ನು ಸಫಲಗೊಳಿಸಿಕೊಳ್ಳುವೆ.

ಮನಸ್ಸು ಎಲ್ಲಿಯವರೆವಿಗೂ ನಿಗ್ರಹವಾಗಿಲ್ಲವೋ ಅಲ್ಲಿಯವರೆಗೆ ಕೆಲವು ನಿಯಮಗಳನ್ನು ಅನುಸರಿಸಲೇಬೇಕು. ಈ ನಿಯಮಗಳಿಲ್ಲದೇ ಇದ್ದರೆ ಎಂದಿಗೂ ನೀನು ನಿಗ್ರಹಿಸಲಾರೆ. ಮನಸ್ಸಿನ ಸ್ವಭಾವ ಕೆಲಸ ದಿಂದ ತಪ್ಪಿಸಿಕೊಳ್ಳುವುದು. ನೀನು ಒಂದು ನಿಯಮವನ್ನುಮಾಡಿಕೊಂಡ ಮೇಲೆ ನಿನ್ನ ಮನಸ್ಸಿಗೆ ಈಗ ನೀನು ಈ ಕ್ರಮಕ್ಕೆ ಬದ್ಧವಾಗಿರಬೇಕು; ನಿನಗೆ ಇಚ್ಛೆ ಇರಲಿ, ಇಲ್ಲದೇಇರಲಿ ಇದರಂತೆ ನಡೆಯಬೇಕೆಂದು ಹೇಳ ಬೇಕು. ನಿನ್ನ ಮನಸ್ಸನ್ನು ಹೀಗೆ ನಿಗ್ರಹಿಸಬೇಕು. ಇದರಲ್ಲಿ ನೀನು ಜಯಶೀಲನಾದರೆ ಮತ್ತಾವ ನಿಯಮವನ್ನೂ ಅನುಸರಿಸಬೇಕಾಗಿಲ್ಲ. ಅವೇ ತಮಗೆ ತಾವೇ ಬಿದ್ದುಹೋಗುವುವು.

ನದಿಯಂತೆ ಜೀವನ ವೇಗವಾಗಿ ಹರಿದುಹೋಗುತ್ತಿದೆ. ಕಳೆದ ದಿನ ಪುನಃ ಬರುವುದಿಲ್ಲ. ಆದಕಾರಣವೇ ಈಗಿರುವ ಕಾಲವನ್ನು ಚೆನ್ನಾಗಿ ಉಪಯೋಗಿಸಿಕೊ. ಕೊನೆಗಾಲದಲ್ಲಿ "ಅಯ್ಯೊ, ವ್ಯರ್ಥವಾಯಿತಲ್ಲ" ಎಂದು ವ್ಯಥೆಪಟ್ಟರೆ ಪ್ರಯೋಜನವಿಲ್ಲ. ಈಗ ಜಾಗ್ರತನಾಗಿ ಸಾಧನೆ ಯಲ್ಲಿ ನಿರತನಾಗು. ನಿನ್ನ ಜೀವನದ ಗುರಿ ಸೇರುವುದಕ್ಕೆ ಅಥವಾ ಆ

ಪ್ರಯತ್ನದಲ್ಲಿ ಬಾಳನ್ನೇ ನಿವೇದಿಸುವುದಕ್ಕೆ ಶಪಥಮಾಡು. ಸಾವು ನಿಶ್ಚಯ; ಇಂದೋ ನಾಳೆಯೋ ಬರಬಹುದು. ಭಗವಂತನನ್ನು ಹೊಂದುವ ಪ್ರಯತ್ನ ದಲ್ಲಿ ಮರಣ ಪ್ರಾಪ್ತವಾದರೆ ಅದರಿಂದ ನಷ್ಟವಿಲ್ಲ, ಅದೊಂದು ಲಾಭ.

ಮನಸ್ಸನ್ನು ಭಗವಂತನಮೇಲೆ ನಿಲ್ಲಿಸಿ. ಅವನನ್ನು ಪಡೆಯು ತ್ತೇನೆಂದು ದೃಢಸಂಕಲ್ಪಮಾಡಿ. ಪ್ರಪಂಚದಲ್ಲಿ ಏನೂ ಇಲ್ಲ, ಎಲ್ಲಾ ದುಃಖಮಯ. ಕೆಲಸಕ್ಕೆ ಬಾರದ ವಸ್ತುವೆಂದು ಇದನ್ನು ನೋಡು. ನೀನು ದುಃಖದಿಂದ ಪಾರಾಗಿಹೋಗಬೇಕು. ಭಗವಂತನ ಕ್ಷಣಿಕನೋಟವೊಂದು ದೊರೆತರೆ ಅನಂತಾನಂದವಾಗುವುದು. ವಿಷಯ ಸುಖ, ಮೋಹ, ಮಾಯ ವಾಗುವುದು. ಒಮ್ಮೆ ದೇವರ ಹತ್ತಿರ ನೀನು ಬಂದರೆ ಅಂಜಿಕೆ ಆತಂಕ ಗಳಿಗೆ ಎಡೆಇಲ್ಲ ಅಲ್ಲಿ. ಪ್ರಾಪಂಚಿಕ ವಸ್ತುವನ್ನು ತೊರೆದು ಆತನ ಪಾದ ಪದ್ಮಗಳ ಮೇಲೆ ಮಾತ್ರ ನೆಲೆಸು.

೧೩

## ಪ್ರಪಂಚ ಮತ್ತು ದೇವರು.

ಸ್ವಾಮಿಜಿ: ದೇವರು ಕಲ್ಪತರು. ಕೇಳಿದುದನ್ನೆಲ್ಲಾ ಅವನು ಅನು ಗ್ರಹಿಸುವನು. ಮನುಷ್ಯನಾಗಿ ಹುಟ್ಟುವ ಭಾಗ್ಯ ಪಡೆದಿದ್ದರೂ ಭಗವಂತನ ಪಾದಾರವಿಂದಗಳಮೇಲೆ ತನ್ನ ಮನಸ್ಸನ್ನು ಇಡಲು ಇಚ್ಛಿಸುವುದಿಲ್ಲ. ಅದರ ಬದಲು ಸಂಸಾರಸಾಗರದಲ್ಲಿ ಮುಳುಗಿ "ಓ! ನಾನೆಷ್ಟು ಸಂತೋಷ ವಾಗಿರುವೆನು" ಎಂದು ತಿಳಿದುಕೊಳ್ಳುವನು. ದೇವರೂ ಕೂಡ ಆ ಸ್ಥಿತಿಗೆ ಭಂಗ ತರುವುದಿಲ್ಲ. ಶೋಕತಾಪಗಳ ಅಲೆಯ ಹೊಡೆತಕ್ಕೆ ಸಿಕ್ಕಿದಾಗ, ಪಶ್ಚಾತ್ತಾಪದಿಂದ "ಅಯ್ಯೋ! ನಾನೇನು ಮಾಡಿದೆ," ಎಂದು ವ್ಯಥೆಪಡು ವನು. ಆಗ ಅವನ ತಪ್ಪು ಗೋಚರವಾಗುವುದು. ಮನುಷ್ಯ ಕಲ್ಪತರು ವಿನ ನೆರಳಕೆಳಗೆ ಕುಳಿತಿರುವನು. ದೇವನಾಗಬೇಕಾದರೆ ದೇವನಾಗುವನು ದಾನವನಾಗಬೇಕಾದರೆ ದಾನವನಾಗುವನು.

ದೇವರು ಮನುಷ್ಯನಿಗೆ ವಿದ್ಯೆ ಮತ್ತು ಅವಿದ್ಯೆ ಎರಡನ್ನೂ ಕೊಟ್ಟಿರು ವನು. ವಿದ್ಯೆ ಎಂದರೆ ನಿತ್ಯಾನಿತ್ಯವಸ್ತುವಿವೇಕ ಮತ್ತು ತ್ಯಾಗ. ಇದ ರಿಂದ ಭಗವಂತನ ಕೃಪೆ ಪಡೆಯಬಹುದು. ಅವಿದ್ಯೆ ಎಂದರೆ ಕಾಮ ಕ್ರೋಧ, ಮೋಹ, ಮದ, ಮಾತ್ಸರ್ಯ. ಇವು ಮಾನವನನ್ನು ದಾನವನಿಗೆ ಸಮನಾಗಿ ಮಾಡುವುದು. ವಿದ್ಯೆಯನ್ನು ರೂಢಿಸಿದರೆ ಅವಿದ್ಯೆ ನಾಶವಾಗು ವುದು. ಪರಮಾನಂದವನ್ನು ಪಡೆಯುವುದಕ್ಕೆ ಯೋಗ್ಯವಾಗಿ ಮಾಡು ವುದು. ಅವಿದ್ಯೆ ಹೆಚ್ಚಾದರೆ ನಾನು ನನ್ನದು ಎಂಬುದು ಹೆಚ್ಚಾಗಿ

ಪ್ರಪಂಚಕ್ಕೆ ಬಂಧಿಸುವುದು. ಭಗವಂತನಿಂದ ಹೆಚ್ಚು ಹೆಚ್ಚು ದೂರ ಹೋಗುವನು. ತುಂಬಾ ಕಷ್ಟನಷ್ಟಗಳನ್ನು ಅನುಭವಿಸಬೇಕಾಗುವುದು. ಮನುಷ್ಯನಲ್ಲಿ ವಿದ್ಯೆ ಅವಿದ್ಯೆ ಮಾತ್ರವಲ್ಲ ಇರುವುದು, ಇವೆರಡನ್ನೂ ವಿಮರ್ಶಿಸುವ ಶಕ್ತಿಯೂ ಇರುವುದು. ಅವನು ಯಾವುದನ್ನು ತೆಗೆದುಕೊಳ್ಳುವನೋ ಅದರಮೇಲೆ ಅವನ ಸೋಲು ಗೆಲುವು ನಿಂತಿರುವುದು.

ನಿಮ್ಮ ಕಷ್ಟಕ್ಕೆ ದೇವರನ್ನು ಗುರಿಮಾಡುವುದು ದೊಡ್ಡ ತಪ್ಪು. ನಿಮ್ಮ ಮನಸ್ಸಿಗೆ ತೋರಿದ ಮಾರ್ಗವನ್ನು ಮೊದಲು ಹಿಡಿದು ಅದರ ಪರಿಣಾಮವನ್ನು ಈಗ ಅನುಭವಿಸುತ್ತಿರುವಿರಿ. ದೇವ್ವರನ್ನು ಹೇಗೆ ದೂರುವೆ? ಕ್ಷಣಿಕಸುಖಕ್ಕೆ ನೀನು ಎಲ್ಲವನ್ನೂ ಮರೆತೆ. ಸರಿ ತಪ್ಪು ಯಾವುದು ಎಂಬುದನ್ನು ಯೋಚಿಸುವುದನ್ನೂ ಮರೆತೆ. ಬೆಂಕಿಗೆ ಬೆರಳು ಇಟ್ಟರೆ ಅದು ಸುಡುವುದು. ಅದು ಬೆಂಕಿಯ ತಪ್ಪೆ? ಇಲ್ಲ, ನೀನೇ ಅದಕ್ಕೆ ಹೊಣೆಗಾರ. ಶ್ರೀರಾಮಕೃಷ್ಣರು ಹೀಗೆ ಹೇಳುತ್ತಿದ್ದರು. "ಒಂದು ದೀಪ ಉರಿಯುತ್ತಿದೆ. ಕೆಲವರು ಅದರ ಬೆಳಕಿನಲ್ಲಿ ಭಾಗವತವನ್ನು ಓದಬಹುದು ಮತ್ತೆ ಕೆಲವರು ಅದರ ಬೆಳಕಿನಲ್ಲಿ ಒಂದು ಸುಳ್ಳುಪತ್ರವನ್ನು ಬರೆಯಬಹುದು. ಬೆಳಕನ್ನೇ ಅದಕ್ಕಾಗಿ ದೂರುವುದಕ್ಕೆ ಆಗುವುದಿಲ್ಲ." ದೇವರು ಮಾನವನೆದುರಿಗೆ ಒಳ್ಳೆಯದು, ಕೆಟ್ಟದ್ದು ಎರಡು ಮಾರ್ಗವನ್ನು ಇಟ್ಟಿರುವನು. ಇಚ್ಛೆ ಬಂದುದನ್ನು ಸ್ವೀಕರಿಸು.

ನೀನು ಆಲೋಚಿಸಿದಂತೆ ಆಗುವೆ. ತ್ಯಾಗ ಮತ್ತು ವಿವೇಕದಿಂದ ದೇವರನ್ನು ಪಡೆದು ಅನಂತಾನಂದಕ್ಕೆ ಹಕ್ಕುದಾರನಾಗು. ಪ್ರಾಪಂಚಿಕ ವಸ್ತುಗಳನ್ನು ಅರಸಿ ಹೊರಟರೆ ಕೆಲವುಕಾಲ ವಿಷಯವಸ್ತುಗಳನ್ನೇನೋ ಪಡೆಯಬಹುದು. ಆದರೆ ಇದು ನಿಶ್ಚಯ; ನಿಮ್ಮ ಭವಿಷ್ಯ ಅಂಧಕಾರವಾಗುವುದು. ಕೊನೆಯಿಲ್ಲದ ದುಃಖವನ್ನು ಅನುಭವಿಸಬೇಕಾಗುವುದು. ನಿನಗೆ ಸುಖಬೇಕಾದರೆ ದುಃಖ ಅನುಭವಿಸಲೇಬೇಕು. ಪ್ರಪಂಚ ಇರುವುದೇ ಹೀಗೆ. ನಿಮಗೆ ಇಚ್ಛೆ ಇರಲಿ ಇಲ್ಲದೇಇರಲಿ ಒಂದಿಲ್ಲದೆ ಮತ್ತೊಂದು ಬರುವುದಿಲ್ಲ.

ಶ್ರೀರಾಮಕೃಷ್ಣರು ಹೀಗೆ ಹೇಳುತ್ತಿದ್ದರು. "ಮಲಯಮಾರುತ ಬೀಸಿದರೆ ಘಟ್ಟ ಮರಗಳೆಲ್ಲ ಗಂಧದ ಮರಗಳಾಗುವುವು. ಆದರೆ ಬೊಂಬು ಬಾಳೆ ಮುಂತಾದ ಟೊಳ್ಳುಮರ ಹಾಗೆಯೇ ಇರುವುವು. ಇದರಂತೆಯೇ ಮನುಷ್ಯರಲ್ಲಿ ಎರಡುವಿಧ. ಮೊದಲನೆ ಗುಂಪಿಗೆ ಸೇರಿದ ಮನುಷ್ಯರು ಬಹಳ ಬೇಗ ಆಧ್ಯಾತ್ಮಿಕ ವಿಷಯಗಳಿಗೆ ಒಲಿಯು

ವರು. ವಿವೇಕ, ವೈರಾಗ್ಯ ಅವರಲ್ಲಿ ಉದಿಸುವುದು. ಪ್ರಪಂಚ ನಿಷ್ಪ್ರಯೋಜನವೆಂದು ತಿಳಿದು ದೇವರಿಗಾಗಿ ಹಂಬಲಿಸುವರು. ತಮ್ಮ ಪ್ರಾಣ ಹೋದರೂ ಜೀವನದ ರಹಸ್ಯವನ್ನು ತಿಳಿದು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದು ಸ್ಥಿರಸಂಕಲ್ಪಚಿತ್ತರಾಗುವರು. ಇಂತಹ ಸ್ಥಿರ ಸಂಕಲ್ಪದಿಂದ ಸಾಧನೆ ಮಾಡಿ ಕೊನೆಗೆ ಗೆಲ್ಲುವರು. ಎರಡನೆ ಗುಂಪಿಗೆ ಸೇರಿದ ಮನುಷ್ಯರು ಆಧ್ಯಾತ್ಮಿಕವಿಷಯಗಳಾಗಲಿ, ಪ್ರಪಂಚದ ಕಷ್ಟ-ದುಃಖಗಳಿಂದಲಾಗಲಿ ಜಾಗ್ರತರಾಗುವುದಿಲ್ಲ. ತಾವು ಎಂದೆಂದಿಗೂ ಪ್ರಪಂಚದಲ್ಲಿ ಇರುವೆವು, ತಾವಿಲ್ಲದೆ ಪ್ರಪಂಚವೇ ನಡೆಯುವುದಿಲ್ಲವೆಂದು ಭಾವಿಸುವರು. "ನನ್ನಲ್ಲಿರುವುದನ್ನು ನಾನು ಪೂರ್ತಿ ಅನುಭವಿಸಬೇಕು. ಇಲ್ಲದೇಇದ್ದರೆ ಹುಚ್ಚನಾಗುತ್ತೇನೆ" ಎಂದು ತಿಳಿದು ದುಃಖ ಮತ್ತು ಅಜ್ಞಾನದ ಅಂಧಕಾರಕ್ಕೆ ಬೀಳುವರು.

ನಿಮಗೆ ಏನು ಬೇಕಾಗಿರುವುದು? ಗಂಧದ ಪರಿಮಳವೆ ಅಥವಾ ಗೊಬ್ಬರದ ದುರ್ಗಂಧವೆ? ನಿಮಗೆ ಶಾಂತಿ ಬೇಕೆ, ಅಶಾಂತಿ ಬೇಕೆ? ನಿಮಗೆ ಏನು ಬೇಕೊ ಅದನ್ನು ನಿಶ್ಚಯಿಸಿ ಪಡೆಯುವುದಕ್ಕೆ ಯತ್ನಿಸಿ. ಕಾಲ ಪ್ರವಾಹದಂತೆ ವೇಗವಾಗಿ ಹರಿದುಹೋಗುತ್ತಿದೆ. ಕಾಲ ಮೀರಿ ಹೋದಮೇಲೆ ಹಿಂದಿನದನ್ನು ಕುರಿತು ದುಃಖಿಸಿದರೆ ಪ್ರಯೋಜನವಿಲ್ಲ. ಒಂದು ಕ್ಷಣವನ್ನೂ ಪೋಲುಮಾಡದೆ ಈಗಿನ ಕಾಲವನ್ನು ಚೆನ್ನಾಗಿ ಉಪಯೋಗಿಸಿಕೊ. ದೇವರಲ್ಲದೆ ಮತ್ತಾವುದನ್ನೂ ಆಲೋಚಿಸದಂತೆ ನಿನ್ನ ಮನಸ್ಸನ್ನು ರೂಢಿಸು. ನಿಮ್ಮ ಆಯಸ್ಸು ಇಷ್ಟೇ ಎಂದು ನಿರ್ಧರವಾಗಿದೆ. ಅವು ಆಗಲೇ ಉರುಳಿಹೋಗುತ್ತಿವೆ. ವೃಥಾಕಾಲಹರಣಮಾಡಬೇಡಿ.

"ಹೇ ಭಗವಂತ! ಜ್ಞಾನ ನೀಡು, ನಿನ್ನವನನ್ನಾಗಿಮಾಡು" ಎಂದು ಹೃತ್ಪೂರ್ವಕ ದೇವರಲ್ಲಿ ಮೊರೆ ಇಡಿ. ನಾನು, ನನ್ನದು ಎಂಬುದನ್ನೆಲ್ಲ ತೊರೆಯಿರಿ. ಅದರಿಂದ ನೀವು ಬೇಕಾದಷ್ಟು ವ್ಯಥೆಪಟ್ಟಿರುವಿರಿ. ನಾನು, ನನ್ನದು ಎಂಬ ಸ್ಥಳಕ್ಕೆ ನೀನು, ನಿನ್ನದು ಎಂಬುದನ್ನು ತನ್ನಿ. ನೀನು ಸತ್ತೊಡನೆಯೆ ನನ್ನದು ಎಂದು ಹೇಳಿಕೊಳ್ಳುವುದು ಏನಾದರೂ ಇದೆಯೇ? ನಿನ್ನದು ಎಂದು ನೀನು ಈಗ ಯಾವುದನ್ನು ತಬ್ಬಿಕೊಂಡಿರುವೆಯೊ ಅದರ ಕಾಲಬಂದರೆ ಅದೆಲ್ಲ ಬಿಟ್ಟುಹೋಗುವುವು. ನಿನ್ನನ್ನು ಗಮನಕ್ಕೇ ತರುವುದಿಲ್ಲ. ನೀನು ಎಲ್ಲವನ್ನೂ ತೊರೆದು ಕಾಣದ ಕಡೆಗೆ ಹೋಗಬೇಕಾಗುವುದು. ಹೆಚ್ಚು ನಾನು, ನನ್ನದು ಎಂದು ಆಲೋಚಿಸಿದಷ್ಟೂ ಬಂಧನ ಹೆಚ್ಚು. ನಿಮ್ಮ ಬಾಳನ್ನೆಲ್ಲ ಸಮರ್ಪಿಸುವಷ್ಟು ಈ

ಸಂಸಾರದಲ್ಲಿ ಏನಿದೆ? ಜನನಮರಣಗಳ ಸಾಗರವನ್ನು ದಾಟಲು ಸಂಸಾರ ಸಹಾಯಮಾಡುವುದೆ? ಪುನರ್ಜನ್ಮದಲ್ಲಿ ಕಾದುಕೊಂಡಿರುವ ದುಃಖದಿಂದ ಇದು ನಿನ್ನನ್ನು ರಕ್ಷಿಸುವುದೆ? ಈ ಜನ್ಮದಲ್ಲಿ ಹುಟ್ಟಿ ಮಾಡಬೇಕಾದುದನ್ನು ಮಾಡದೆ ಇದ್ದರೆ ಎಂತಹ ದುರದೃಷ್ಟ ನಿನ್ನದಾಗುವುದು. ಕಷ್ಟಪಟ್ಟು ಸಾಧನೆಮಾಡು. ಗುರಿಯನ್ನು ಮುಟ್ಟಬೇಕೆಂದು ಹೃತ್ಪೂರ್ವಕ ಅವನನ್ನು ಬೇಡು.

ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣಪರಮಹಂಸರು ಏನು ಮಾಡುತ್ತಿದ್ದರು ನಿನಗೆ ಗೊತ್ತಿಲ್ಲವೆ? ಜಗನ್ಮಾತೆಯ ದರ್ಶನಕ್ಕೆ ಅವರು ಎಷ್ಟು ವ್ಯಥೆಯಿಂದ “ತಾಯಿ, ಮತ್ತೊಂದುದಿನ ವ್ಯರ್ಥವಾಯಿತು. ಆದರೂ ನೀನು ನನಗೆ ದರ್ಶನಕೊಡಲಿಲ್ಲ” ಎಂದು ಎಷ್ಟು ಕಾತುರತೆಯಿಂದ ಬೇಡಿದರು. ತೀವ್ರಆಕಾಂಕ್ಷೆಯಿಂದ ಅವನನ್ನು ಪ್ರಾರ್ಥಿಸಿ. ಈ ಪ್ರಪಂಚ ಒಂದು ದುಃಖದಕೊಂಪೆಯಲ್ಲದೆ ಮತ್ತೇನು? ಬೇಕಾದಷ್ಟು ಕಾಲವನ್ನು ಇಲ್ಲಿ ದುಃಖತೊಂದರೆಯಲ್ಲಿ ಕಳೆದಿರುವೆ. ನಂತರವೂ ಹೀಗೆಯೇ ಮಾಡ ಮಾಡಬೇಕೆಂದು ಬಯಸುವೆಯೇನು?

ಶ್ರೀರಾಮಕೃಷ್ಣರ ಆಧೀನಕ್ಕೆ ನೀನು ಬಂದಿರುವೆ. ಅವರು ನಿನ್ನನ್ನು ಅನುಗ್ರಹಿಸಿರುವರು ಎಂದು ತಿಳಿ. ಅವರ ಕೃಪೆಯಿಂದ ಒಳ್ಳೆಯ ಸಹಾಯ ಪಡೆ ಜನನಮರಣಗಳ ರಹಸ್ಯವನ್ನು ಭೇದಿಸಿ ಶಾಶ್ವತಾನಂದವನ್ನು ಪಡೆಯದೆ ಇದ್ದರೆ ನೀನು ದುರದೃಷ್ಟ. ನೀವು ಈ ಯುಗಕ್ಕೆ ಸೇರಿದವರು. ನಿಮ್ಮಲ್ಲಿ ಆ ಸ್ಫೂರ್ತಿ ಇದೆ. ಅದರಿಂದ ಪೂರ್ಣ ಪ್ರತಿಫಲಪಡೆಯುವುದನ್ನು ಮರೆಯಬೇಡಿ. ಯಾರೂ ಯಾವ ಕಾಲದಲ್ಲೂ ಹಿಂದೆ ಶ್ರೀರಾಮಕೃಷ್ಣರು ನಮಗೆ ತೋರಿರುವಷ್ಟು ಸುಲಭವಾದ ಸರಳಮಾರ್ಗವನ್ನು ತೋರಿಲ್ಲ. ಈ ಸಮಯವನ್ನು ಕಳೆದುಕೊಂಡರೆ ಬಹಳ ದುಃಖಪಡಬೇಕಾಗುವುದು.

ಶ್ರದ್ಧೆ, ಭಕ್ತಿಯ ಹಾಯಿಯನ್ನು ಹರಡಿ. ಬೀಸುತ್ತಿರುವ ಆಧ್ಯಾತ್ಮಿಕ ತಂಗಾಳಿಯ ಸಹಾಯದಿಂದ ಮುಂದುವರಿಯಿರಿ. ಹೀಗೆ ಮಾಡಿದರೆ ದೋಣಿ ಬಹುಬೇಗ ಗುರಿಸೇರುವುದು. ಭಗವಂತನು ನಿಮಗಾಗಿ ಕಾಯುತ್ತಿರುವರು. ಜಾಗ್ರತರಾಗಿ, ಏಳಿ! ಅನಂತಶಕ್ತಿ ನಿಮ್ಮಲ್ಲಿರುವುದು. ನಿನ್ನಲ್ಲಿ ದೃಢವಿಶ್ವಾಸವಿರಲಿ. “ನಾನು ಅವರ ಮಂಗಳನಾಮವನ್ನು ಕೇಳಿರುವೆನು. ಅವರ ಪಾದದಡಿಯಲ್ಲಿ ಶರಣುಹೊಂದಿರುವೆನು. ಅಂಜಿಕೆ, ದುರ್ಬಲತೆಗೆ ನನ್ನಲ್ಲಿ ಅವಕಾಶವಿಲ್ಲ. ಅವರ ದಯೆಯಿಂದ ಈ ಜೀವನದಲ್ಲೇ ಅವರನ್ನು

ಪಡೆಯುತ್ತೇನೆ" ಎನ್ನಿ. ಹಿಂತಿರುಗಿ ನೋಡಬೇಡಿ- ಮುಂದೆ ಹೋಗಿ. ಅವರ ದರ್ಶನದಿಂದ ಧನ್ಯರಾಗಿ. ನಿಮ್ಮ ಜೀವನದ ಉದ್ದೇಶವನ್ನು ಸಫಲಗೊಳಿಸಿ. ಅನಂತಾನಂದದಲ್ಲಿ ಭಾಗಿಗಳಾಗಿ.

೧೪

## ಮಾನವ ಸ್ವಭಾವ

ಸ್ವಾಮಿಜಿ: ಈ ಸ್ಥಳ [ಹರಿದ್ವಾರ] ಬಹಳ ಪವಿತ್ರ. ಏಕಾಗ್ರತೆಗೆ ಕಷ್ಟಪಡಬೇಕಾಗಿಲ್ಲ. ಇಲ್ಲಿಯ ವಾತಾವರಣವೆ ಪವಿತ್ರವಾಗಿರುವುದು. ಪಾವನ ಗಂಗಾ, ಭವ್ಯ ಹಿಮಾಲಯ ಧ್ಯಾನಮಗ್ನವಾಗುವಂತೆ ಮಾಡುವುವು. ಓಂಕಾರದ ಅನಾಹತ ಧ್ವನಿಯನ್ನು ಇಲ್ಲಿ ಕೇಳಬಹುದು. ಇಂತಹ ಪವಿತ್ರಸ್ಥಳಕ್ಕೆ ಬಂದು ನಿದ್ರೆ ಮತ್ತು ಸೋಮಾರಿತನದಲ್ಲಿ ಕಾಲಕಳೆದರೆ ನೀನು ದುರ್ಭಾಗ್ಯ. ಧ್ಯಾನತಪಸ್ಸಿನಲ್ಲಿ ಪ್ರಾಣವನ್ನು ಬಿಡುವುದು ಎಷ್ಟೋ ಮೇಲು.

ಮಾನವಜನ್ಮ ಭಕ್ತಿ, ಮುಕ್ತಿ ಗಳಿಸುವುದಕ್ಕೆ. ಕೇವಲ ಪ್ರಾಣಿಯಂತೆ ಸಂತಾನೋತ್ಪತ್ತಿಗಲ್ಲ. ದೇವರು ಮಾನವಜನ್ಮದಲ್ಲಿ ಹೆಚ್ಚು ಆವಿರ್ಭೂತನಾಗಿರುವನು. ಅವನನ್ನು ತಿಳಿದುಕೊಂಡು ಪಡೆಯಲು ಯತ್ನಿಸು. ಸತ್ಯಸಾಕ್ಷಾತ್ಕಾರಕ್ಕೆ ಶ್ರೀರಾಮಕೃಷ್ಣರ ಶಿಷ್ಯರು ಎಷ್ಟು ಕಠಿಣ ತಪಸ್ಸನ್ನು ಮಾಡಿದರು ಗೊತ್ತಿಲ್ಲವೆ? ಅವರು ಶ್ರೀರಾಮಕೃಷ್ಣರಲ್ಲಿ ಜಾಜ್ವಲ್ಯಮಾನವಾದ ಆಧ್ಯಾತ್ಮಿಕಜ್ಯೋತಿಯನ್ನು ಕಂಡರು. ಆದಕಾರಣವೆ ಅವರ ಶಿಷ್ಯರು ಅಷ್ಟು ತಪಸ್ಸನ್ನು ಮಾಡಲು ಸಾಧ್ಯವಾಯಿತು. ಅವರು ಮಾಡಿದಷ್ಟು ನಿನ್ನ ಕೈಯಲ್ಲಿ ಆಗದೆ ಇರಬಹುದು. ಆದರೆ ಸಾಧ್ಯವಾದಷ್ಟು ಮಾಡು.

ನಿಮ್ಮ ಆಧ್ಯಾತ್ಮಿಕ ಸಾಧನೆಗೆ ಸಹಾಯ ಮಾಡುವ ಸಂಘ ಸ್ಥಾಪನೆ ಮಾಡಲು ಸ್ವಾಮಿ ವಿವೇಕಾನಂದರು ತಮ್ಮ ಪ್ರಾಣವನ್ನೇ ಅರ್ಪಿಸಿದರು. ಸ್ವಾಮಿ ವಿವೇಕಾನಂದರಿಗೆ ನಿಮ್ಮ ಮೇಲೆ ಇದ್ದ ಪ್ರೀತಿಯನ್ನು ತಿಳಿದುಕೊಳ್ಳಲು ಯತ್ನಿಸಿ. ಎಲ್ಲರಮೇಲಿನ ಪ್ರೇಮಾಧಿಕ್ಯದಿಂದ ಅವರು ಮಿತಿಮೀರಿ ಕೆಲಸಮಾಡಿ ತಮ್ಮ ಆಯುಸ್ಸನ್ನೇ ಧಾರೆ ಎರೆದರು. ಅವರಿಗೆ ಕೃತಘ್ನರಾಗಬೇಡಿ. ವಂಗದೇಶದವರಮೇಲೆ ಅವರಿಗೆ ಹೆಚ್ಚು ನಂಬಿಕೆ ಇತ್ತು. ವಂಗ ಯುವಕರೆ! ಸ್ವಾಮಿವಿವೇಕಾನಂದರು ತಮ್ಮ ಸಂಘವನ್ನು ನಿಮ್ಮ ಪವಿತ್ರ ಜವಾಬ್ದಾರಿಗೆ ಬಿಟ್ಟಿರುವರು. ಅವರ ಯೋಗ್ಯ ಅನುಯಾಯಿಗಳಾಗಿ ನಿಷ್ಠಾವಂತರಾಗಿ. ಶ್ರೀರಾಮಕೃಷ್ಣರು ಜಗತ್ತಿಗೆ ಸ್ವಾಮಿವಿವೇಕಾನಂದರ

ಮೂಲಕ ವ್ಯಕ್ತವಾಗಿ, ಅವರ ಮೂಲಕ ತಮ್ಮ ಸಂದೇಶವನ್ನು ಇತ್ತರು. ಸಾಧಾರಣ ಮನುಷ್ಯರು ಶ್ರೀರಾಮಕೃಷ್ಣರನ್ನು ತಿಳಿದುಕೊಳ್ಳಬೇಕಾದರೆ ಬಹಳ ಕಷ್ಟ. ಸ್ವಾಮಿವಿವೇಕಾನಂದರು ಸಾಮಾನ್ಯ ಮನುಷ್ಯರೂ ಕೂಡ ತಿಳಿದುಕೊಳ್ಳುವಂತೆ ಶ್ರೀರಾಮಕೃಷ್ಣರ ಆದರ್ಶಗಳನ್ನು ಪ್ರಪಂಚಕ್ಕೆ ಕೊಟ್ಟಿರುವರು. ಎಲ್ಲಾ ಪುಣ್ಯಾತ್ಮರೂ ಅವರ ಕೃಪಾಶ್ರಯದೆಡೆಗೆ ಬರಲೇ ಬೇಕಾಗುವುದು.

ಸ್ವಾಮಿವಿವೇಕಾನಂದರ ಉಪನ್ಯಾಸಗಳನ್ನು ಚೆನ್ನಾಗಿ ಓದಿ. ಎಲ್ಲಿ ನಿಮಗೆ ಗೊತ್ತಾಗುವುದಿಲ್ಲವೊ ಸ....ಮುಂತಾದವರನ್ನು ಕೇಳಿ. ಎಲ್ಲರಿಗೂ ಗೊತ್ತಾಗುವಂತೆ ಶ್ರೀರಾಮಕೃಷ್ಣರ ಸಂದೇಶವನ್ನು ಸ್ವಾಮಿವಿವೇಕಾನಂದರು ಸಾರಿರುವರು. ಸ್ವಾಮಿವೇಕಾನಂದರ ಬೋಧನೆಯ ಬೆಳಕನ್ನು ಬಿಟ್ಟರೆ ಶ್ರೀರಾಮಕೃಷ್ಣರನ್ನು ತಿಳಿಯಲೆತ್ನಿಸುವುದು ಭ್ರಾಂತಿ. ಪುನಃಪುನಃ ಶ್ರೀರಾಮಕೃಷ್ಣರ ಉಪದೇಶ ಮತ್ತು ಸ್ವಾಮಿವಿವೇಕಾನಂದರ ಉಪನ್ಯಾಸ ವನ್ನು ಓದಿ ಧ್ಯಾನಮಗ್ನನಾಗು. ಈಗ ಮನಸ್ಸನ್ನು ಏಕಾಗ್ರಮಾಡದೆ ಇದ್ದರೆ ನಂತರ ಪಶ್ಚಾತ್ತಾಪಪಡುವೆ. ನಿನ್ನ ಜೀವನದ ಅತ್ಯುತ್ತಮ ಕಾಲ ಇದು. ಈ ಕಾಲವನ್ನು ಸದುಪಯೋಗಪಡಿಸಿಕೊ. ಒಮ್ಮೆ ಆಧ್ಯಾತ್ಮಿಕ ಜೀವನದಲ್ಲಿ ಪ್ರತಿಷ್ಠಿತನಾದರೆ ನಂತರ ಅಪಾಯವಿಲ್ಲ. ನಂತರ ನಿನ್ನ ಮನಸ್ಸನ್ನು ಹೇಗೆ ಬೇಕಾದರೂ ತಿರುಗಿಸಬಹುದು. ಮನಸ್ಸನ್ನು ಸ್ವಾಧೀನಕ್ಕೆ ತನ್ನಿ. ಇದು ಸಿದ್ಧಿಸಿದರೆ ಎಷ್ಟೋ ದೂರ ಹೋದಂತೆ. ಆದರೆ ಜೋಪಾನವಾಗಿರಿ. ಒಂದು ಅಂಗುಲವೂ ನಿಮ್ಮ ಮನಸ್ಸು ಧ್ಯೇಯ ದಿಂದ ಜಾರಬಾರದು. ಚಂಚಲವಾಗುವುದಕ್ಕೆ ಪ್ರಯತ್ನಿಸಿದರೆ, ಏನನ್ನಾ ದರೂ ಮಾಡಿ ನಿಗ್ರಹಿಸಿ.

ಪ್ರಾರಂಭದಲ್ಲಿ ಧ್ಯಾನ, ಜಪ, ಅಧ್ಯಯನಕ್ಕೆ ಕ್ಲಪ್ತಕಾಲವಿರಬೇಕು. ಸ್ಥಿರಸಂಕಲ್ಪನಾಗಿ ನಿನ್ನ ಮನಸ್ಸಿಗೆ "ನಿನಗೆ ಇಚ್ಛೆಇದೆಯೋ ಇಲ್ಲವೊ ನೀನು ಇದನ್ನು ಅನುಸರಿಸಲೇ ಬೇಕು" ಎಂದು ಹೇಳಿ. ಕೆಲವು ದಿನ ಗಳಾದಮೇಲೆ ಇದೇ ಒಂದು ಅಭ್ಯಾಸವಾಗುವುದು. ಧ್ಯಾನವಿಲ್ಲದೇ ಇರುವುದಕ್ಕೆ ಆಗುವುದಿಲ್ಲ. ಇಂತಹ ಸ್ಥಿತಿ ನಿನಗೆ ಪ್ರಾಪ್ತವಾದರೆ ಧ್ಯೇಯದ ಕಡೆಗೆ ಮುಂದುವರಿಯುತ್ತಿರುವೆ ಎಂದು ತಿಳಿ. ಊಟವಿಲ್ಲದವನು ಊಟಕ್ಕೆ, ನಿದ್ರೆಯಿಲ್ಲದವನು ನಿದ್ರೆಗೆ, ಕಾತುರನಾಗುವಂತೆ ನೀನು ದೇವರಿಗೆ ಕಾತುರನಾದರೆ ಆಗ ಅವನನ್ನು ಸಮೀಪಿಸುತ್ತಿರುವೆ ಎಂದು ತಿಳಿ.

ಮೊದಲು ಭಗವದಾನಂದದ ಸವಿ ಪಡೆದು ಅಮೃತನಾಗು. ನಂತರ

ಏನಾದರಾಗಲಿ ಚಿಂತೆಯಿಲ್ಲ. ಬೀದಿಯಲ್ಲಿ ನಿನ್ನನ್ನು ಬಿಸುಡುವರೊ ಸಿಂಹಾಸನದಮೇಲೆ ನಿನ್ನನ್ನು ಕುಳ್ಳಿರುಸುವರೊ ಎಲ್ಲಾ ಒಂದೆ. ಸ್ಪರ್ಶ ಮಣಿಯ ಸೋಂಕಿನಿಂದ ಕಬ್ಬಿಣ ಚಿನ್ನವಾದಮೇಲೆ ಅದನ್ನು ಪೆಟ್ಟಿಗೆ ಯಲ್ಲಿಟ್ಟರೇನು, ನೆಲದಲ್ಲಿ ಹೂತರೇನು.

"ಅದ್ವೈತವನ್ನು ನಿಮ್ಮ ಜೇಬಿನಲ್ಲಿಟ್ಟುಕೊಂಡು ಏನನ್ನು ಬೇಕಾದರೂ ಮಾಡಿ" ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಬ್ರಹ್ಮಜ್ಞಾನ ಅಥವಾ ಪರಾಭಕ್ತಿಯನ್ನು ಪಡೆದಮೇಲೆ ನೀನು ಯಾವ ಕೆಲಸವನ್ನು ಮಾಡಿದರೂ ಬಂಧನಕ್ಕೆ ಬೀಳುವುದಿಲ್ಲ.

ಆಧ್ಯಾತ್ಮಿಕ ಜೀವನದಲ್ಲಿ ಎಷ್ಟೋ ಅಡಚಣೆಗಳಿವೆ. ಜಗನ್ಮಾತೆ ತನ್ನ ಮಾಯಾಮೋಹದಿಂದ ಜೀವಿಗಳನ್ನು ಸುಲಭವಾಗಿ ಬಿಡುವುದಿಲ್ಲ. ಆಕೆಯ ಕೃಪೆಯನ್ನು ಪಡೆಯಬೇಕಾದರೆ ಹೃತ್ಪೂರ್ವಕ ಪ್ರಾರ್ಥಿಸಬೇಕು. ನಿನ್ನಲ್ಲಿ ಹಿಂದಿನ ಜನ್ಮಗಳಿಂದ ಬಂದ ಎಷ್ಟೋ ಹೀನ ಸಂಸ್ಕಾರಗಳು ಬೇರೆ ಇವೆ. ಗೆಲ್ಲುವುದಕ್ಕೆ ಈಗಲೂ ಹೊಸ ಹೊಸ ಸಂಸ್ಕಾರಗಳು ಆಗುತ್ತಿವೆ. ಈ ಸಂಸ್ಕಾರಗಳೊಂದಿಗೆ ಹೋರಾಡುವುದಕ್ಕೆ ಇಡೀ ಜೀವನ ಸಿದ್ಧವಾಗಿರಬೇಕು. ನೀವು ಅದನ್ನು ಎದುರಿಸಿದಷ್ಟೂ ಬಲವಾಗುವುವು. ಸೋಲು ನಿರಾಶೆಯ ಮಧ್ಯದಲ್ಲಿಯೂ ನೀನು ಹಿಂತಿರುಗದೆ ಇದ್ದರೆ ಗುರಿ ಯನ್ನು ಸೇರುವೆ.

ಮನುಷ್ಯನಲ್ಲಿ ಒಳ್ಳೆಯದು ಕೆಟ್ಟದ್ದು ಎಂಬ ಎರಡು ಸ್ವಭಾವವಿದೆ. ಒಂದು ತ್ಯಾಗದ ಕಡೆ ಒಯ್ಯುವುದು, ಮತ್ತೊಂದು ಭೋಗದ ಕಡೆ ಒಯ್ಯು ವುದು. ಯಾವಾಗಲೂ ಇವೆರಡಕ್ಕೂ ಹೋರಾಟವಿರುವುದು. ಯಾವ ಸಂಸ್ಕಾರ ಗೆಲ್ಲುವುದೋ ಅದರಮೇಲೆ ಮನುಷ್ಯನ ಸ್ವಭಾವ ನಿಶ್ಚಿತ ವಾಗುವುದು.

ಪ್ರಪಂಚದಲ್ಲಿ ಭೋಗಿಸುವುದಕ್ಕೆ ಬೇಕಾದಷ್ಟು ಅವಕಾಶವಿರುವುದ ರಿಂದ ಅವುಗಳಲ್ಲಿ ಆಸಕ್ತರಾಗಿ ಬೇರೊಂದು ಆನಂದವಿದೆ ಎಂಬುದನ್ನು ಮರೆಯುವರು. "ಮುಂದೆ ಏನಾಗುವುದೊ ಗೊತ್ತಿಲ್ಲ. ಸದ್ಯದಲ್ಲಿ ನಮ್ಮಲ್ಲಿರು ವುದನ್ನು ಏತಕ್ಕೆ ಅನುಭವಿಸಕೂಡದು. ದೇವರು ಸಿಕ್ಕುವನೊ ಇಲ್ಲವೊ, ಅಮೃತತ್ವ ಸಾಧ್ಯವೊ ಅಲ್ಲವೊ, ಯಾರಿಗೂ ಗೊತ್ತಿಲ್ಲ. ಪ್ರಪಂಚವನ್ನು ಅನುಭವಿಸುವುದು ನಮ್ಮ ಕೈಯ್ಯಲ್ಲಿದೆ ಇದನ್ನು ಏತಕ್ಕೆ ನಾವು ತ್ಯಜಿಸ ಬೇಕು" ಎಂದು ತರ್ಕಿಸುವನು. ಅದನ್ನು ಪಡೆಯಲು ಆಲೋಚಿಸದೆ ಧುಮುಕುವನು. ಆದರೆ ಪ್ರಪಂಚದಿಂದ ಬರುವ ದುಃಖದ ಅನುಭವದಿಂದ

ಪ್ರಾಪಂಚಿಕಸುಖ ದುಃಖ ಸಂಕಟವನ್ನು ತರುವುದಲ್ಲದೆ ಶಾಂತಿ ಆನಂದ ವನ್ನು ಕೊಡಲಾರದು ಎಂದು ಗೊತ್ತಾದಾಗ, "ಅಯ್ಯೋ, ನಾವೇನು ಮಾಡಿದೆವು" ಎಂದು ವ್ಯಥೆಪಡುವರು. ಯಾವ ನಿಗ್ರಹವೂ ಇಲ್ಲದೆ ಭೋಗಜೀವನವನ್ನು ಅನುಸರಿಸಿ ಮನುಷ್ಯ ಇಂದ್ರಿಯಗಳಿಗೆ ಗುಲಾಮ ನಾಗುವನು.

೧೫

## ದೇವರನ್ನು ಮಾತ್ರ ಅರಸು

ಪ್ರತಿಯೊಬ್ಬರೂ ಸುಖವನ್ನು ಅಪೇಕ್ಷಿಸುವರು. ದುಃಖ, ಕಷ್ಟ ಯಾರಿಗೆ ಬೇಕು? ಆದರೆ ಆ ಸುಖವನ್ನು ಹೇಗೆ ಪಡೆಯುವುದು? ಎಲ್ಲಾ ಸುಖಕ್ಕೂ ಆಧಾರಭೂತನಾದ ಆ ಭಗವಂತನನ್ನೆ ತೊರೆದು ಕ್ಷಣಿಕ ಭೋಗಗಳನ್ನು ಅರಸಿಕೊಂಡುಹೋದರೆ ದೊರಕುವುದಿಲ್ಲ. ಮನುಷ್ಯ ನನ್ನು ಮೋಹಗೊಳಿಸುವುದಕ್ಕೆ ಅವನು ಹಲವು ವಸ್ತುಗಳನ್ನು ಸೃಷ್ಟಿ ಸಿರುವನು. ಇದನ್ನೆಲ್ಲಾ ತೊರೆದು ಅವನನ್ನು ಪ್ರಾರ್ಥಿಸು. ಆಗ ಅವನು ನಿನ್ನನ್ನು ಎತ್ತಿಕೊಳ್ಳಲು ಧಾವಿಸುವನು.

ಪ್ರಪಂಚದಲ್ಲಿ ಬೇಕಾದಷ್ಟು ಆಡಿರುವಿರಿ. ಅದನ್ನು ತೊರೆದು ಈಗ ಜಗನ್ಮಾತೆಯನ್ನು ಕರೆಯುವುದಕ್ಕೆ ವೇಳೆಯಾಗಿದೆ. ಮಗುವಿಗೆ ಆಟದ ಮೇಲೆ ಆಸೆ ಇರುವಾಗ ತಾಯಿ ಆಡುವುದಕ್ಕೆ ಆಟದ ಸಾಮಾನನ್ನು ಕೊಡುವಳು. ಆದರೆ ಯಾವ ಮಗುವಿಗೆ ಆಟದಮೇಲೆ ಇಚ್ಛೆ ಇಲ್ಲವೊ ಆ ಮಗುವನ್ನು ಎತ್ತಿಕೊಳ್ಳುವಳು. ಜಗನ್ಮಾತೆಯ ಅಂಕದಮೇಲೆ ನೆಲಸುವ ಮಗು ಧನ್ಯ. ಅದು ಆಟವನ್ನು ನೋಡಿ ಸಂತೋಷಪಡುವುದು ಮಾತ್ರ ವಲ್ಲ, ಜಗನ್ಮಾತೆಯ ಸಂಗದಿಂದಲೂ ಧನ್ಯವಾಗುವುದು. ಆಟದಲ್ಲಿ ಮಗ್ನ ವಾಗಿರುವ ಮಗು ಆಟದಲ್ಲಿ ಸಂತೋಷವನ್ನೇನೊ ಪಡೆಯುವುದು. ಆದರೆ ಅದರಲ್ಲಿ ಬೀಳುವ ಅಪಾಯವೂ ಇದೆ. ತನ್ನ ಸಂಗಡಿಗರೊಂದಿಗೆ ಆಡಿ ಏಟನ್ನೂ ತಿನ್ನುವುದು. ಆದರೆ ತಾಯಿ ತೊಡೆಯಮೇಲೆ ಇರುವ ಮಗುವಿಗೆ ಈ ಭಯವಿಲ್ಲ. ಅದು ಯಾವಾಗಲೂ ಸಂತೋಷವಾಗಿರುವುದು. ತಾಯಿ ತನ್ನನ್ನು ರಕ್ಷಿಸುವಳು, ಬೇಕಾದುದೆಲ್ಲವನ್ನೂ ಕೊಡುವಳು ಎಂದು ಅದಕ್ಕೆ ಗೊತ್ತಿದೆ.

ಪರಮಹಂಸರು ಹೇಳಿದ ಮಾವಿನ ತೋಪಿನ ಉಪಮಾನ ತುಂಬಾ ಚೆನ್ನಾಗಿದೆ. "ನೀವು ಬಂದಿರುವುದು ಮಾವಿನ ಹಣ್ಣನ್ನು ತಿನ್ನುವುದಕ್ಕೆ. ತೋಟದಲ್ಲಿ ಎಷ್ಟು ಮರ, ಕೊಂಬೆ, ಎಲೆಗಳಿವೆ ಎಂದು ಏತಕ್ಕೆ ಕೇಳುವಿರಿ?

ಮಾವಿನ ಹಣ್ಣನ್ನು ತಿಂದು ತೃಪ್ತರಾಗಿ. " ಭಗವತ್ಸಾಕ್ಷಾತ್ಕಾರಕ್ಕೆ ನೀವು ಈ ಪ್ರಪಂಚಕ್ಕೆ ಬಂದಿರುವಿರಿ. ಮೊದಲು ಇದನ್ನು ಸಾಧಿಸಿ ಧನ್ಯರಾಗಿ. ನಿಮ್ಮ ಸಮಸ್ಯೆಯನ್ನು ನೀವೇ ಪರಿಹರಿಸಿ. ಜೀವನದ ಪಯಣಕ್ಕೆ ಅಣಿಯಾಗಿ. ಸಾಧನೆಮಾಡಿ ಭಗವದಾನಂದದ ಸವಿನೋಡಿ. ಜನನಮರಣಾತೀತರಾಗಿ. ಹಗಲು ರಾತ್ರಿ ಪ್ರಾರ್ಥಿಸಿ. ನೀನು ಯಾವರೀತಿ ಅವನನ್ನು ಧ್ಯಾನಿಸಿದರೂ ಒಳ್ಳೆಯದೆ. ನಿನಗೆ ಯಾವ ಆಕಾರ, ಹೆಸರಮೇಲೆ ಇಷ್ಟವೊ ಅದನ್ನು ತೆಗೆದುಕೊಂಡು ಪ್ರಾರ್ಥಿಸು. ಅವನ ದರ್ಶನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಪಾರ್ವತಿ ಒಮ್ಮೆ ಪರಮೇಶ್ವರನನ್ನು ಸಚ್ಚಿದಾನಂದವನ್ನು ಹೇಗೆ ಪಡೆಯುವುದು ಎಂದು ಕೇಳಿದಳು. ಶ್ರದ್ಧೆಯಿಂದ ಎಂದು ಉತ್ತರ ಬಂದಿತು.

ನಿನಗೆ ಸರಿಯಾದ ದಾರಿಯನ್ನು ತೋರಿರುವರು. ಶ್ರದ್ಧೆ, ತಾಳ್ಮೆ ಛಲದಿಂದ ಮುಂದುವರಿಯಿರಿ. ಸಾಧನೆಯ ವಿವರದ ವಿಷಯವಾಗಿ ತರ್ಕಿಸಿ ಕಾಲಹರಣಮಾಡಬೇಡಿ. ಯಾವ ರೀತಿಯಲ್ಲಾದರೂ ನೀವು ಭಗವಂತನನ್ನು ಪ್ರಾರ್ಥಿಸಿ. ಅವನಾಶೀರ್ವಾದವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಶ್ರೀರಾಮಕೃಷ್ಣರು '' ಸಿಹಿದೋಸೆಯನ್ನು ನೀವು ಯಾವ ಕಡೆಯಿಂದ ತಿಂದರೂ ಸಿಹಿಯಾಗಿರುತ್ತದೆ" ಎನ್ನುತ್ತಿದ್ದರು. ನೀವೊಂದು ಕಲ್ಪತರುವಿನ ಕೆಳಗೆ ಕುಳಿತುಕೊಂಡಂತೆ ಇರುವಿರಿ. ಏನು ಕೋರುತ್ತೀರೊ ಅದು ದೊರಕುವುದು.

ನಾನೇ ತುಂಬಾ ಬುದ್ಧಿವಂತನೆಂದು ತಿಳಿಯಬೇಡಿ. ಕಾಗೆ ತಾನೇ ತುಂಬಾ ಬುದ್ಧಿವಂತನಂತೆ ಯೋಚಿಸುವುದು ; ಆದರೆ ಕಸದಮೇಲೆ ಬದುಕಬೇಕಾಗಿದೆ. ಯಾರು ಈ ಪ್ರಪಂಚದಲ್ಲಿ ತುಂಬಾ ಬುದ್ಧಿವಂತರೆಂದು ಭಾವಿಸುವರೋ ಅವರು ಕೊನೆಗೆ ಮೋಸಹೋಗುವರು.

ಅನುಮಾನವಿಲ್ಲದೆ ದೃಢವಿಶ್ವಾಸದಿಂದ ಧ್ಯಾನಮಗ್ನರಾಗಿ. ಸ್ವಲ್ಪ ದಿನಗಳಾದಮೇಲೆ ದೇವರು ದೊರಕದಿದ್ದರೆ ನಿರಾಶರಾಗಬೇಡಿ. ಸಾಗರದಲ್ಲಿ ಬೆಲೆಬಾಳುವ ರತ್ನವಿದೆ. ಮೊದಲನೆಸಲ ಮುಳುಗಿದೊಡನೆಯೆ ಅದು ನಿಮಗೆ ದೊರಕದೆ ಇರಬಹುದು. ಗುರುವಾಕ್ಯದಲ್ಲಿ ಶ್ರದ್ಧೆಇಡಿ ಎಂದು ನಾನು ಮತ್ತೊಮ್ಮೆ ನಿಮಗೆ ಹೇಳುತ್ತೇನೆ. ಗಾಢಧ್ಯಾನದಲ್ಲಿ ತನ್ಮಯರಾಗಲು ಯತ್ನಿಸಿ. ಬೇಗಲೋ, ತಡವಾಗಿಯೋ ಭಗವಂತನ ದರ್ಶನ ಪಡೆಯುವುದು ಖಂಡಿತ.

ಮನಸ್ಸು ಚಂಚಲವಾಗುವುದಕ್ಕೆ ಬಿಡಬೇಡಿ. ಸಾಧನೆಯಲ್ಲಿ ನಿಷ್ಠೆ

ಇರಲಿ. ಸಕಾಲದಲ್ಲಿ ಅವನ ಕೃಪೆ ದೊರಕುವುದು. ನೀನು ಒಬ್ಬ ದೊಡ್ಡ ಮನುಷ್ಯನನ್ನು ನೋಡಬೇಕೆಂದು ಇರುವೆ. ಮೊದಲು ಅವನ ಆಳನ್ನು ನೋಡಿ ತೃಪ್ತಿಪಡಿಸಬೇಕು. ಇದರಂತೆಯೇ ಭಗವಂತನನ್ನು ನೋಡ ಬೇಕಾದರೆ ಮೊದಲು ಸಾಧುಪುರುಷರನ್ನು ನೋಡಿ ಆಧ್ಯಾತ್ಮಿಕಸಾಧನೆ ಮಾಡಬೇಕು. ದೇವರನ್ನು ಪ್ರಪಂಚದಲ್ಲಿ ಎಲ್ಲರಿಗಿಂತಲೂ ಪ್ರೀತಿಪಾತ್ರ ನಾದವನು ಎಂದು ಹೃತ್ಪೂರ್ವಕ ಅವನ ದರ್ಶನ ಮತ್ತು ಕೃಪೆಗೆ ಪ್ರಾರ್ಥಿಸಿ.

ಮಗುವಿನಂತೆ ಕಂಬನಿ ಕರೆಯಿರಿ ಭಗವಂತನ ಹತ್ತಿರ. ಬಿಡುವಿಲ್ಲದೆ ಮಗು ಅತ್ತರೆ ತಾಯಿ ಅದರ ಸಮೀಪಕ್ಕೆ ಬರದೆ ಇರಲಾರಳು. ಇದರಂತೆಯೇ ದೇವರೂ ಕೂಡ ಯಾರು ಅವಿಶ್ರಾಂತರಾಗಿ ಆತನ ದರ್ಶನ ಮತ್ತು ಕೃಪಾ ಕಾಂಕ್ಷಿತರಾಗಿ ಪ್ರಾರ್ಥಿಸುವರೊ ಅವರಿಗೆ ಮೈದೋರುವನು. ನಿದ್ರೆಯಿಂದ ಏಳಿ. ದೃಢಭಕ್ತಿಯಿಂದ ಅವನ ಕೃಪೆಯನ್ನು ಅರಸಿ. ಹಡಗಿನವರ ಹತ್ತಿರ ಇರುವ ಉತ್ತರಮುಖಿಯಂತೆ ಮನಸ್ಸನ್ನು ಒಮ್ಮುಖ ಮಾಡಿ. ಯಾವ ದಿಕ್ಕಿನಲ್ಲಿ ಹಡಗು ತೇಲುತ್ತಿದ್ದರೂ ಅದರ ಸೂಜಿಮಾತ್ರ ಉತ್ತರವನ್ನೇ ತೋರುವುದು. ಆಗ ಹಡಗು ದಾರಿತಪ್ಪುವುದಿಲ್ಲ. ಇದರಂತೆಯೇ ನಮ್ಮ ಮನಸ್ಸುಕೂಡ ದೇವರಮೇಲೆ ಅದನ್ನು ನೆಲೆಸಿದರೆ ಯಾವ ಅಪಾಯವೂ ಇಲ್ಲ. ಅಕಸ್ಮಾತ್ ಒಂದು ಕೆಟ್ಟ ವಾತಾವರಣಕ್ಕೆ ಬಿದ್ದರೂ ಅವನ ಶ್ರದ್ಧೆ ಭಕ್ತಿ ಕುಗ್ಗುವುದಿಲ್ಲ. ಯಾವಾಗಲಾದರೂ ಭಗವಂತನ ವಿಷಯವನ್ನು ಕೇಳಿದೊಡನೆಯೆ ಪ್ರೇಮೋನ್ಮತ್ತನಾಗುವನು. ಚಕ್ಕಮುಕ್ಕಿಕಲ್ಲು ನೂರಾರು ವರ್ಷಗಳಿಂದ ನೀರಿನಲ್ಲಿ ಇದ್ದರೂ ಮೇಲೆ ತಂದು ಕುಟ್ಟಿದೊಡನೆಯೆ ಕಿಡಿ ಕಾರುವುದು.

ಭಗವಂತನ ದರ್ಶನ ಯಾರಿಗೆ ಒಮ್ಮೆ ಆಗಿದೆಯೊ ಅವರ ಮನಸ್ಸು ಯಾವಾಗಲೂ ಭಗವಂತನಮೇಲೆ ನೆಲೆಸಿರುವುದು. ಭಗವಂತನ ವಿಷಯ ವನ್ನು ಮಾತನಾಡುವುದು, ಸಾಧುಸಂಗವನ್ನು ಹುಡುಕುವುದು ಇದಲ್ಲದೆ ಅವರಿಗೆ ಬೇರೆ ವಿಷಯದಲ್ಲಿ ಸಂತೋಷವೇ ಇಲ್ಲ.

ಗಾಳಿಗೆ ತಾರಾಡುವ ತರಗೆಲೆಯಂತೆ ದೇವರು ನಿನ್ನನ್ನು ಎಲ್ಲಿ ಇಟ್ಟರೂ ಸಮಾಧಾನದಿಂದಿರು. ನಿನ್ನ ಸ್ವಂತ ಇಚ್ಛೆ ಏನೂ ಇಲ್ಲದಿರಲಿ.

ನಿನ್ನ ಮನಸ್ಸು ಈಗ ಶುದ್ಧವಾಗಿದೆ. ಯಾವ ಕಳಂಕವೂ ತಾಕಿಲ್ಲ. ಯಾವಾಗಲೂ ಮನಸ್ಸನ್ನು ಹೀಗೆಯೇ ಇಟ್ಟಿರುವುದಕ್ಕೆ ಪ್ರಯತ್ನಿಸು. ಶುದ್ಧವಾದ ಮನಸ್ಸು ಒಣಗಿದ ಬೆಂಕಿಯ ಕಡ್ಡಿಯಂತೆ. ಅದನ್ನು ಗೀಚಿ

ದೊಡನೆಯೇ ಹತ್ತುವುದು. ಅದೇ ಒದ್ದೆಯಾದರೆ ಪ್ರಯೋಜನವಿಲ್ಲ. ಅದನ್ನು ಗೀಚುತ್ತಾ ಹೋದರೆ ಮುರಿಯುವುದೇ ವಿನಃ ಹತ್ತುವುದಿಲ್ಲ. ಇದರಂತೆಯೇ ಮನಸ್ಸು ಒಮ್ಮೆ ಮಲಿನವಾಯಿತು ಎಂದರೆ ಅದನ್ನು ಹಿಂದಿನ ಪರಿಶುದ್ಧ ಸ್ಥಿತಿಗೆ ತರಬೇಕಾದರೆ ಬಹಳ ಕಷ್ಟ.

೧೬

## ಮನೋನಿಗ್ರಹ

ಶಿಷ್ಯ: ಎಷ್ಟು ಪ್ರಯತ್ನಪಟ್ಟರೂ ಮನಸ್ಸನ್ನು ನಿಗ್ರಹಿಸಲು ಆಗ ಲಿಲ್ಲ. ಅದು ತುಂಬಾ ಚಂಚಲವಾಗಿದೆ. ಅದನ್ನು ಹೇಗೆ ನಿಗ್ರಹಿಸು ವುದು. ದಯವಿಟ್ಟು ವಿವರಿಸಿ.

ಸ್ವಾಮಿಜಿ: ಮನೋನಿಗ್ರಹವೇನೋ ಕಷ್ಟವೇ ನಿಜ. ಆದರೆ ಅದು ಅಸಾಧ್ಯವಲ್ಲ. ಕ್ರಮವಾದ ಸಾಧನೆಯಿಂದ ಅದನ್ನು ಶಾಂತಮಾಡಿ ನಿಗ್ರಹಿಸಬಹುದು. ಪ್ರತಿದಿನವೂ ಧ್ಯಾನಮಾಡಿ. ಎಂದಿಗೂ ತಪ್ಪಬೇಡಿ. ಚಂಚಲ ಹುಡುಗನಂತೆ ಓಡುವ ಸ್ವಭಾವ ಮನಸ್ಸಿನದು. ಅಡ್ಡಾಡಲು ಹೋದಾಗಲೆಲ್ಲ ಅದನ್ನು ಪುನಃ ಎಳೆದು ತಂದು ದೇವರಮೇಲೆ ನಿಲ್ಲಿಸು. ಹೀಗೆ ಎರಡು ಮೂರು ವರುಷ ಪ್ರಯತ್ನಪಟ್ಟರೆ ಅವರ್ಣನೀಯ ಆನಂದ ಬರುವುದು. ನಿಮ್ಮ ಮನಸ್ಸು ಹೇಳಿದಂತೆ ಕೇಳುವುದು, ಶಾಂತವಾಗು ವುದು. ಮೊದಮೊದಲು ಧ್ಯಾನ ಬಹಳ ಕಷ್ಟ, ನೀರಸ. ಔಷಧಿಯನ್ನು ಸೇವಿಸುವಂತೆ ನೀನು ಇದನ್ನು ಮಾಡತೊಡಗಿದರೆ ಅಂತ್ಯವಿಲ್ಲದ ಪರಮಾ ನಂದ ನಿನ್ನದಾಗುವುದು. ಪರೀಕ್ಷೆಯಲ್ಲಿ ತೇರ್ಗಡೆಹೊಂದಲು ವಿದ್ಯಾರ್ಥಿ ಎಷ್ಟು ಕಷ್ಟಪಡುವನು. ಭಗವದ್ದರ್ಶನ ಅದಕ್ಕಿಂತ ಸುಲಭ. ದೃಢ ಮನಸ್ಸಿನಿಂದ ಹೃತ್ಪೂರ್ವಕ ಅವನನ್ನು ಪ್ರಾರ್ಥಿಸಿದರೆ ನಿನಗೆ ಅವನು ದರ್ಶನವನ್ನು ನೀಡುವನು.

ಶಿಷ್ಯ: ಇದೆಲ್ಲಾ ಆಶಾಜನಕವೇ ಸರಿ. ಆದರೂ ಇಷ್ಟೊಂದು ಧ್ಯಾನಮಾಡಿದರೂ ನಾನು ಸ್ವಲ್ಪವೂ ಮುಂದುವರಿದಿಲ್ಲ ಎಂದು ಆಲೋಚಿಸಿ ದಾಗ ಎಲ್ಲಾ ವ್ಯರ್ಥವಾಗಿ ಕಾಣುವುದು. ದಾರುಣ ನಿರಾಶೆ ಜೀವನವನ್ನು ಕಾಡುವುದು. ಗುರಿ ಸೇರುವ ಚಿಹ್ನೆಯೇ ಇಲ್ಲ. ಆಗ ಏನುಮಾಡಬೇಕು?

ಸ್ವಾಮಿಜಿ: ಎಂದಿಗೂ ನಿರಾಶನಾಗಬೇಡ. ನಿರಾಶೆಗೆ ಕಾರಣವಿಲ್ಲ. ಕರ್ಮನಿಯಮವನ್ನು ಯಾರೂ ಮೀರಲಾರರು. ನೀನೊಂದು ಒಳ್ಳೆಯ ಕೆಲಸವನ್ನು ಮಾಡಿದರೆ ಅದು ಒಳ್ಳೆಯ ಪರಿಣಾಮವನ್ನುಂಟುಮಾಡಲೇ ಬೇಕು. ಪವಿತ್ರ ಭಗವನ್ನಾಮವನ್ನು ಭಕ್ತಿಯಿಂದಾಗಲಿ, ಇಲ್ಲದೇ ಇರಲಿ

ಹೇಗಾದರೂ ಉಚ್ಚಾರಮಾಡಿದರೆ ಅದರಿಂದ ಒಳ್ಳೆಯದಾಗಲೇಬೇಕು. ಪ್ರತಿಫಲ ಅನಿವಾರ್ಯ. ನಿರಾಶೆಯನ್ನೆಲ್ಲಾ ಹೊರದೂಡಿ, ನಿಷ್ಠೆಯಿಂದ ಬಿಡದೆ ಸಾಧನೆಮಾಡಿ. ಅನಂತರ ಶಾಂತಿ ನಿನ್ನಲ್ಲಿ ನೆಲಸುವುದು. ಧ್ಯಾನದಿಂದ ಮನಸ್ಸುಮಾತ್ರ ಸಮಾಧಾನಸ್ಥಿತಿಗೆ ಬರುವುದಲ್ಲ; ಜೊತೆಗೆ ದೇಹವೂ ಉತ್ತಮವಾಗುವುದು. ರೋಗರುಜಿನಗಳು ಕಡಿಮೆಯಾಗುವುವು. ಒಳ್ಳೆಯ ಆರೋಗ್ಯದ ದೃಷ್ಟಿಯಿಂದಲಾದರೂ ಧ್ಯಾನಮಾಡಬೇಕು.

ಶಿಷ್ಯ: ಸ್ವಾಮಿಜಿ, ಉಪದೇಶದಿಂದ ಏನು ಪ್ರಯೋಜನ? ಒಬ್ಬ ಗುರುವಿನ ಸಹಾಯವಿಲ್ಲದೆ ಭಗವಂತನಿಗೆ ತಾನೇ ಅರ್ಪಿಸಿಕೊಂಡರೆ ಸಾಕ್ಷಾತ್ಕಾರಕ್ಕೆ ಸಾಲದೆ ?

ಸ್ವಾಮಿಜಿ: ಉಪದೇಶ ಆವಶ್ಯಕ. ಇದರಿಂದ ಏಕಾಗ್ರತೆಗೆ ಸಹಾಯವಾಗುವುದು. ಉಪದೇಶವನ್ನು ಪಡೆದಾದಮೇಲೆ ಯಾವ ಇಷ್ಟದಮೇಲೆ ಮನಸ್ಸನ್ನು ಏಕಾಗ್ರಮಾಡಬೇಕೆಂದು ಹೇಳುವರು. ಮನಸ್ಸು ಒಂದೊಂದು ದಿನ ಒಂದೊಂದು ಆಕಾರದಮೇಲೆ ಚಂಚಲಿಸುವುದು. ಉಪದೇಶ ಪಡೆಯದೇಇದ್ದರೆ ಏಕಾಗ್ರಮಾಡುವುದಕ್ಕೆ ಮನಸ್ಸಿಗೆ ಒಂದು ಆಕಾರವೇ ಇರುವುದಿಲ್ಲ. ಇಂದು ಹರಿ ಮೇಲೆ ಧ್ಯಾನಮಾಡುವೆ, ನಾಳೆ ಕಾಳಿ, ಇನ್ನೊಂದುದಿನ ನಿರಾಕಾರಪರಬ್ರಹ್ಮನಮೇಲೆ. ಇದರಿಂದ ಮನಸ್ಸಿಗೆ ದಾರುಣ ಅಶಾಂತಿ. ಸಾಧಕನಿಗೆ ಇದು ತುಂಬಾ ಹಾನಿಕಾರಿ. ಇದರಿಂದ ಪಾರಾಗಿ ಮನಸ್ಸು ಶಾಂತಿಯಲ್ಲಿ ನೆಲಸದೇಇದ್ದರೆ ಆಧ್ಯಾತ್ಮಿಕ ಸಾಕ್ಷಾತ್ಕಾರ ಒಂದು ಭ್ರಾಂತಿಯಾಗುವುದು. ಚಂಚಲತೆಯಿಂದ ಪಾರಾಗಬೇಕಾದರೆ ಮನಸ್ಸಿಗೆ ಶಾಂತಿ ಲಭಿಸಬೇಕಾದರೆ, ಉಪದೇಶ ಅಥವಾ ಒಬ್ಬ ಗುರುವಿನ ಸಹಾಯ ಆವಶ್ಯಕ. ಆಧ್ಯಾತ್ಮಿಕ ಜೀವನ ಕಡುಕಷ್ಟದ ಪಯಣ. ದಾರಿಯಲ್ಲಿ ಎಷ್ಟೋ ಅಪಾಯಗಳಿವೆ. ಒಬ್ಬ ಅನುಭವಸ್ಥ ಮಾರ್ಗದರ್ಶಕನಿಲ್ಲದೇಇದ್ದರೆ ಎಷ್ಟೇ ಬುದ್ಧಿವಂತನಾದರೂ ಎಡಹುವುದರಲ್ಲಿ ಸಂದೇಹವಿಲ್ಲ.

ಮಗು! ಸುಮ್ಮನೆ ವ್ಯಾಕುಲಪಡದೆ ಪ್ರಯತ್ನಪಡು. ಕೊನೆಗೆ ಶಾಂತಿ ಸಿಕ್ಕುವುದು. ಮೊದಮೊದಲು ಅಕ್ಷರವನ್ನು ಕಲಿಯುವಂತೆ ನೀರಸ ಪ್ರಯತ್ನಪಡಬೇಕು. ಚಿಂತಿಸಬೇಡ, ಗೊಣಗಾಡಬೇಡ, ಕ್ರಮೇಣ ಶಾಂತಿ ಬರುವುದು. ಶಾಂತಿ ಇಲ್ಲ, ಆನಂದ ಇಲ್ಲ ಎಂದು ಯಾವಾಗಲೂ ಗೊಣಗಾಡುವವನೊಂದಿಗೆ ನಾನು ಹೇಗೆ ವರ್ತಿಸುತ್ತೇನೆ ಗೊತ್ತಿದೆಯೆ? ಉಪದೇಶಪಡೆದ ಎರಡು ಮೂರು ವರುಷಗಳ ವರೆವಿಗೂ ಅವರಿಗೆ ಯಾವ ಉತ್ತರ

ವನ್ನೂ ಹೇಳುವುದಿಲ್ಲ. ಅದನ್ನು ಲಕ್ಷಿಸುವುದೇ ಇಲ್ಲ. ನಂತರ ಅವರು ನನ್ನನ್ನು ಕಂಡಾಗ, ಈಗ ಸ್ವಲ್ಪ ಮುಂದುವರಿಯುತ್ತಿರುವೆವು; ಶಾಂತಿ ಸಮಾಧಾನ ಸಿಕ್ಕಿದೆ ಎನ್ನುವರು. ಮನಸ್ಸು ಒಂದು ಸ್ಥಿಮಿತಕ್ಕೆ ಬರ ಬೇಕಾದರೆ ಒಬ್ಬನು ಕೆಲವು ವರುಷ ಪ್ರಯತ್ನಪಡಬೇಕು. ಅದಕ್ಕೇ ಬಿಡದೆ ಮೂರು ವರುಷವಾದರೂ ಪ್ರಯತ್ನಪಡಿ. ಆಗ ಮಾತ್ರ ಶಾಂತಿ ಪಡೆಯುವುದಕ್ಕೆ ನಿಮಗೆ ಹಕ್ಕಿದೆ. ಮುಂಚೆ ಇಲ್ಲ. ಯಾವ ಸಾಧನೆ ಯನ್ನೂ ಮಾಡುವುದಿಲ್ಲ, ಆದರೂ ಮುಂದುವರಿಯಬೇಕು; ಇದು ಮೂರ್ಖತನ. ಸೋಮಾರಿತನ ಅಥವಾ ಉಪಾಯದಿಂದ ಏನನ್ನೂ ಸಾಧಿಸ ಲಾಗುವುದಿಲ್ಲ. ನಿನಗೆ ನಿಜವಾಗಿಯೂ ಶಾಂತಿ ಬೇಕಾಗಿದ್ದರೆ ದೇವರ ದರ್ಶನವನ್ನು ಪಡೆಯಲು ಕಾತುರನಾಗಿದ್ದರೆ, ನಿಷ್ಠೆಯಿಂದ ಪ್ರಯತ್ನ ಪಟ್ಟು ಕಾಯಬೇಕು. ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ಸಕಾಲ ಬರಬೇಕು.

ಪ್ರಯತ್ನಪಟ್ಟು ಕಾಯುವುದೊಂದು ಮಾತ್ರ ನಿನ್ನದು. ತಾಯಿ ಹಕ್ಕಿಗೆ ಗೊತ್ತಿದೆ ಮೊಟ್ಟೆಯನ್ನು ಯಾವಾಗ ಒಡೆಯಬೇಕೆಂಬುದು. ಸಕಾಲದಲ್ಲಿ ಜಗನ್ಮಾತೆ ಕಾಣಿಸಿಕೊಳ್ಳುವಳು. ಸಾಧನೆಮಾಡಿ, ತಾಳಿ. ಹೀಗೆ ಕಾಯುವುದು ಬಹಳ ಕಷ್ಟ. ಭಕ್ತ ಯಾವಾಗಲೂ ಅನುಮಾನ ದಲ್ಲಿರುವನು. ಒಂದುಸಲ ಭರವಸೆ, ಒಂದುಸಲ ನಿರಾಶೆ, ಈಗ ಸುಖ, ತಕ್ಷಣವೇ ದುಃಖ, ಹೀಗೆ ಹೋರಾಟ ಸಾಗುವುದು. ಭಕ್ತ ಒಂದು ನಿರಂತರ ಭಯಂಕರ ಹೋರಾಟದಲ್ಲಿ ನಿರತನಾಗಿರುವನು. ಭಗವಂತನ ದರ್ಶನ ಪ್ರಾಪ್ತವಾಗುವವರೆವಿಗೂ ಇದು ಇರುವುದು. ಒಬ್ಬ ಯೋಗ್ಯ ಗುರುವಿನ ಆಸರೆ ಇದ್ದರೆ ಈ ಹೋರಾಟ ಕಡಿಮೆಯಾಗುವುದು. ಶಿಷ್ಯನ ಮನಸ್ಸು ಇನ್ನೂ ಮಾಗಿಲ್ಲದೇ ಇದ್ದರೂ ಮೇಲಕ್ಕೆ ಎತ್ತಬಲ್ಲ. ಇಂತಹ ಸಹಾಯದಿಂದ ಅಪಾಯವೂ ಇದೆ. ಇದನ್ನು ಹೆಚ್ಚು ವೇಳೆ ಪ್ರಯತ್ನಿ ಸಿದರೆ ಹೋರಾಟ ಇನ್ನೂ ಬಲವಾಗುವುದು. ನಿರಾಶೆ ಇನ್ನೂ ಆಳ ವಾಗುವುದು.

ಸಾಧನೆಯ ಕಾಲದಲ್ಲಿ ಸಾಧಕ ಯಾವಾಗಲೂ ಜಾಗ್ರತನಾಗಿರ ಬೇಕು. ನಡತೆಯ ಕ್ಲಿಪ್ತಕ್ರಮವನ್ನು ಅನುಸರಿಸಬೇಕು. ಅವುಗಳಿಂದ ಎಂದಿಗೂ ಜಾರಕೂಡದು. ಬ್ರಹ್ಮಚಾರಿಯಾಗಿರಬೇಕು. ಯಾವ ಆಹಾರ ದೇಹಕ್ಕೆ ಒಳ್ಳೆಯದೊ ಅದನ್ನು ಮಾತ್ರ ಸೇವಿಸಬೇಕು. ಆಧ್ಯಾತ್ಮಿಕ ಜೀವನದ ಅನುಭವಸ್ಥರ ಪ್ರತ್ಯಕ್ಷ ರಕ್ಷಣೆಯೊಳಗೆ ಇರಬೇಕು. ಧ್ಯಾನದಲ್ಲಿ ಮನಸ್ಸನ್ನು ಹೆಚ್ಚು ಒತ್ತಾಯಮಾಡಕೂಡದು. ಇಲ್ಲದೇ ಇದ್ದರೆ ದುಃಖಕ್ಕೆ

ಒಳಗಾಗುವನು. ಮೆದುಳು ಉದ್ರೇಕವಾಗುವುದು. ತಲೆ ಸುತ್ತುವುದು. ಇನ್ನೂ ಹಲವು ಮೆದುಳು ಜಾಡ್ಯ ಮೊದಲಾಗುವುವು.

ಮೊದಮೊದಲು ಧ್ಯಾನ, ಮನಸ್ಸಿನೊಂದಿಗೆ ಒಂದು ದ್ವಂದ್ವಯುದ್ಧ. ಮನಸ್ಸು ಯಾವಾಗಲೂ ಹೊರಗೆ ಹೋಗುವುದು. ಸಾಧಕ ಅದನ್ನು ದೇವರ ಸಮೀಪಕ್ಕೆ ಎಳೆಯುವನು. ಆಗ ತಲೆಕಾಯುವುದರಲ್ಲಿ ಸಂದೇಹ ವಿಲ್ಲ. ಸಾಧಕ ಇದರಿಂದ ಪಾರಾಗಬೇಕು. ಮೊದಲು ಪ್ರಾಣಾಯಾಮ ಮುಂತಾದ ಹಠಯೋಗ ಅಂಗಸಾಧನೆ ಮಾಡಬೇಕು. ಆಧ್ಯಾತ್ಮಿಕ ಜೀವನದಲ್ಲಿ ಕ್ರಮವಾಗಿ ನಿಧಾನವಾಗಿ ನಡೆಯಬೇಕು. ಕ್ರಮೇಣ ಪ್ರಾಥಮಿಕ ಹೋರಾಟ ಕಡಿಮೆಯಾಗಿ ನಿಜವಾದ ಧ್ಯಾನಸ್ಥಿತಿಗೆ ಬರುವನು. ಅನಂತರ ಹಲವು ಗಂಟೆಗಳು ಧ್ಯಾನಮಾಡಿದರೂ ದೇಹ ಮತ್ತು ಮನಸ್ಸಿಗೆ ದೀರ್ಘನಿದ್ರೆಯಿಂದ ವಿಶ್ರಾಂತಿ ಸಿಕ್ಕುವಂತೆ ಆಗುವುದು. ಅಂತರ್ಯದಲ್ಲಿ ಆನಂದವನ್ನೂ ಅನುಭವಿಸುವನು.

ಸಾಧಕ ತನ್ನ ಆಹಾರಕ್ಕೆ ಗಮನ ಕೊಡಬೇಕು. ದೇಹ ಮನಸ್ಸಿಗೆ ಬಹಳ ಹತ್ತಿರ ಸಂಬಂಧವಿರುವುದರಿಂದ ಒಂದರಲ್ಲಿ ಬದಲಾವಣೆ ಆದರೆ ಮತ್ತೊಂದರಲ್ಲಿ ಬದಲಾವಣೆಯಾಗುವುದು. ಅಶುದ್ಧ ಆಹಾರದಿಂದ ಹೊಟ್ಟೆ ಕೆಟ್ಟರೆ ಮನಸ್ಸಿನ ಮೇಲೂ ಅದೇ ಪರಿಣಾಮವುಂಟಾಗುವುದು. ಚಂಚಲ ಮನಸ್ಸಿಗೆ ಧ್ಯಾನ ಅಸಾಧ್ಯ. ಆದಕಾರಣವೇ ಆಹಾರದಮೇಲೆ ಅಷ್ಟೊಂದು ಗಮನವನ್ನು ಕೊಡಬೇಕು.

ಸಾಧಕ ಎಂದಿಗೂ ಹೆಚ್ಚು ಊಟಮಾಡಕೂಡದು. ಅವನು ತನ್ನ ಹಿಂದಿನ ತಪ್ಪು, ಸೋಲು ಮುಂತಾದುವನ್ನು ಕುರಿತು ಚಿಂತಿಸುತ್ತಿರಕೂಡದು. ಯಾವ ಒಂದು ಮಹಾಪಾಪವನ್ನು ಮಾಡಿದ್ದರೂ ಮನುಷ್ಯನ ಕ್ಷುದ್ರದೃಷ್ಟಿಗೆ ಮಾತ್ರ ಪಾಪ ಅದು. ದೇವರ ದೃಷ್ಟಿಯಲ್ಲಿ ಅಲ್ಲ. ಭಗವಂತನ ಕೃಪಾದೃಷ್ಟಿಯೊಂದು ಲಕ್ಷಾಂತರ ಜನ್ಮಗಳಿಂದ ಸಂಚಿತವಾದ ಪಾಪವನ್ನು ನಾಶಮಾಡುವುದು. ಶಾಸ್ತ್ರದಲ್ಲಿ ಪಾಪಕ್ಕೆ ವಿಧಿಸಿರುವ ಶಿಕ್ಷೆ ಕೇವಲ ಸಮಾಜದ ಭದ್ರತೆಗೆ ಮತ್ತು ವ್ಯಕ್ತಿ ಹೆಚ್ಚು ಪಾಪವನ್ನು ಮಾಡದೆ ಇರಲಿ ಎಂದು. ಭಗವಂತ ನಮ್ಮ ತಂದೆ. ಯಾವಾಗಲೂ ಕೃಪಾಸಿಂಧು. ಯಾವಾಗಲೂ ಮಕ್ಕಳನ್ನು ಪ್ರೀತಿಸುವನು. ಅವನ ಮಂಗಳನಾಮ ಪಾಪವನ್ನೆಲ್ಲ ಹೊರದೂಡುವುದು. ನಾವು ಹೃತ್ಪೂರ್ವಕ ಅವನನ್ನು ಪ್ರಾರ್ಥಿಸಿದರೆ ನಿರಾಶರಾಗಬೇಕಾಗಿಲ್ಲ.

ನಮ್ಮ ಹಿಂದಿನ ಕರ್ಮದ ಪರಿಣಾಮವಾಗಿ ಕೆಲವುವೇಳೆ ನಿರಾಶೆಯ

ಮೋಡ ಕವಿಯುವುದು. ಆದರೆ ಸಾಧಕ ಅದಕ್ಕೆ ವಶನಾಗಬೇಕಾಗಿಲ್ಲ. ಹಿಂದಿನ ಸಂಸ್ಕಾರಗಳು ಪುನಃ ತನ್ನ ಸ್ವಾಧೀನಕ್ಕೆ ನಮ್ಮನ್ನು ಸೆಳೆಯ ಲೆತ್ನಿಸುವವು ಎಂದು ತಿಳಿದು ಅವುಗಳೊಂದಿಗೆ ಹೋರಾಡಲು ಸಿದ್ಧನಾಗಿರ ಬೇಕು. ದೇವರು ಸಾಮರ್ಥ್ಯವನ್ನು ಕೊಡುವನು. ಭಗವನ್ನಾಮವೇ ಅಭೇದ್ಯವಜ್ರಕವಚವಾಗುವುದು. ಎಲ್ಲ ಸಂಕಟದಿಂದಲೂ ಪಾರುಮಾಡು ವುದು. ಇದೊಂದು ಸಾಧನೆಯ ಮಾರ್ಗ. ಮೊದಲು ಇದು ನೀರಸ, ಬೇಜಾರು. ಇನ್ನೊಂದು ಮಾರ್ಗವಿದೆ. ಅದೇ ವೈಷ್ಣವರ ಮಾರ್ಗ. ಇದು ಸುಲಭ ಮಾರ್ಗ. ಇಲ್ಲಿ ಅಷ್ಟು ಕಷ್ಟವಿಲ್ಲ. ಬಲಪ್ರಯೋಗವಿಲ್ಲ. ಇಲ್ಲಿ ಶ್ರೀಕೃಷ್ಣನನ್ನೊ ರಾಮನನ್ನೊ ಯಾವುದಾದರೊಂದು ಅವತಾರದ ಜೀವನ ಮತ್ತು ಸಂದೇಶವನ್ನು ಕುರಿತು ಚಿಂತಿಸಬೇಕು. ಇಲ್ಲಿ ಬೇಜಾರಿಲ್ಲ. ನೀರಸವಿಲ್ಲ. ಭಗವಂತನೊಂದಿಗೆ ಯಾವುದಾದರೊಂದು ಸಂಬಂಧವನ್ನು ಕಲ್ಪಿಸಿಕೊಂಡು ಅದರ ಮೂಲಕ ಆರಾಧಿಸಬೇಕು. ಇಲ್ಲಿಯೂ ದೊಡ್ಡ ಅಪಾಯವಿದೆ. ಅನೇಕ ಅಯೋಗ್ಯರು ಭಗವಂತನನ್ನು ತಮ್ಮ ಪ್ರಿಯತಮ ನೆಂದು ಪೂಜಿಸಲು ಪ್ರಯತ್ನಪಟ್ಟು ಗುರಿಯಿಂದ ಚ್ಯುತರಾಗಿರುವರು.

೧೮

## ದೇವರೆಡೆಗೆ ಮನಸ್ಸನ್ನು ತಿರುಗಿಸುವುದು

ಶಿಷ್ಯ :- ಸ್ವಾಮಿಜಿ, ಮನಸ್ಸನ್ನು ಹೇಗೆ ದೇವರಕಡೆಗೆ ತಿರುಗಿಸು ವುದು ?

ಸ್ವಾಮಿಜಿ:- ಸಾಧು ಸತ್ಪುರುಷರ ಸಂಘದಿಂದ ಅವರು ಹೇಗೆ ಆಚರಿಸು ತ್ತಾರೆ ಎಂದು ಗಮನಿಸಿ; ನಿಮ್ಮ ಜೀವನದಲ್ಲೂ ಹಾಗೇ ನಡೆದುಕೊಳ್ಳು ವುದರಿಂದ ಮನಸ್ಸನ್ನು ದೇವರಕಡೆಗೆ ತಿರುಗಿಸಬಹುದು. ಭಗವಂತನೆಡೆಗೆ ತಿರುಗಿದವರ ನಡೆನುಡಿಯನ್ನು ಅನುಸರಿಸಬೇಕು. ಭಗವದ್ದರ್ಶನಕ್ಕೆ ಆತಂಕವಾಗಿರುವುದೇ ನಿನ್ನ ಮನಸ್ಸಿನ ಸಂದೇಹ ಮತ್ತು ಗಲಿಬಿಲಿ. ಅವು ಮನಸ್ಸನ್ನು ಮೆಟ್ಟುವುವು, ಚಂಚಲಗೊಳಿಸಿ ಹಲವು ವಸ್ತುಗಳಮೇಲೆ ಹೋಗುವಂತೆ ಮಾಡುವುವು. ವಿವೇಕವೆಂಬ ಕೂರಲಗಿನಿಂದ ಅವನ್ನು ಆಚೆಗೆ ಓಡಿಸಬೇಕು. ನಿನ್ನ ಸ್ವಂತ ಸಾಮರ್ಥ್ಯದಿಂದ ಹಾಗೆ ಮಾಡಲು ಸಾಧ್ಯವಿಲ್ಲದೇಇದ್ದರೆ ಇದರಲ್ಲಿ ಪಳಗಿದ ಸಾಧುಗಳ ಸಹಾಯವನ್ನು ಪಡೆ.

ಸಾಧಕನು ಮಹಾಪುರುಷರೆಡೆಯಲ್ಲಿ ಕುಳಿತು ಅವರು ಹೇಳುವು ವನ್ನು ಲಕ್ಷ್ಯವಿಟ್ಟು ಕೇಳಬೇಕು. ಅವರ ಬುದ್ಧಿವಾದವನ್ನು ಮನಸ್ಸಿನಲ್ಲಿ ಸಂಗ್ರಹಿಸಬೇಕು. ಅದು ಇಲ್ಲಿಗೇ ಕೊನೆಗಾಣಕೂಡದು. ಅವರಿಂದ

ಏನನ್ನು ಕೇಳುತ್ತಾನೆಯೋ ಅದನ್ನು ಪಡೆಯಲು ಯತ್ನಿಸಬೇಕು. ಇದನ್ನು ಜ್ಞಾಪಕದಲ್ಲಿಡು. ಮಾತು, ಪಾಂಡಿತ್ಯ, ವ್ಯಾಸಂಗ ಇದಾವುದೂ ನಿಮಗೆ ಸಾಕ್ಷಾತ್ಕಾರವನ್ನು ಕೊಡಲಾರದು. ನೀವು ಕೇಳಿದುದನ್ನು, ಕಲಿತುದನ್ನು ಅನುಷ್ಠಾನಕ್ಕೆ ತಂದರೆ ಮಾತ್ರ ಇದು ಸಾಧ್ಯ. ಬ್ರಹ್ಮಚರ್ಯವಿಲ್ಲದೆ ಇದನ್ನು ಅನುಷ್ಠಾನಕ್ಕೆ ತರುವುದು ಅಸಾಧ್ಯ. ಅದಕ್ಕೇ ಬ್ರಹ್ಮಚರ್ಯ ಅತಿಮುಖ್ಯ. ಕೇವಲ ಶಾಸ್ತ್ರ ಓದಿ ಬ್ರಹ್ಮನನ್ನು ತಿಳಿದುಕೊಳ್ಳಬೇಕೆಂದು ಹಲವರು ಯತ್ನಿಸುವರು. ಬ್ರಹ್ಮಚರ್ಯವಿಲ್ಲದೆ ಶಾಸ್ತ್ರಸಾರ ಗೊತ್ತಾಗುವುದಿಲ್ಲ, ಅವನನ್ನು ತಿಳಿಯಲು ಆಗುವುದಿಲ್ಲವೆಂಬುದನ್ನು ಅವರು ಅರಿಯರು.

ಹಲವು ಕಾರಣಗಳಿಂದ ಬ್ರಹ್ಮಚರ್ಯ ಅತಿಮುಖ್ಯ. ನಿಮ್ಮ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಿ ಅವನನ್ನು ಪಡೆಯಬೇಕೆಂದು ಇಚ್ಛೆ ಇದ್ದರೆ ಬ್ರಹ್ಮಚರ್ಯದಮೇಲೆ ನಿಂತು ಸಾಧನೆಮಾಡಿ. ನೀವು ಯಾವುದಾದರೂ ಗ್ರಂಥವನ್ನು ಓದಬೇಕೆಂದು ಇಚ್ಛಿಸಿದರೆ "ಶ್ರೀರಾಮಕೃಷ್ಣವಚನಾಮೃತ" ಮುಂತಾದ ಗ್ರಂಥವನ್ನು ಓದಿ. ಅದನ್ನು ಓದಿ ಆಚರಣೆಗೆ ತರಲು ಯತ್ನಿಸಿ. ನೀವು ಅದನ್ನು ಓದಿದಷ್ಟೂ ನಿಮಗೆ ಅಲ್ಲಿ ಹೆಚ್ಚು ಬೆಳಕು ಕಾಣುವುದು. ಇನ್ನೊಬ್ಬರಿಂದ ಕೇಳಿ ತಿಳಿದ ಪಾಂಡಿತ್ಯಕ್ಕಿಂತ ಸಾಧನೆಮಾಡಿ ಪಡೆದುಕೊಂಡ ಅನುಭವ ಬೇರೆ. ಸಾಕ್ಷಾತ್ಕಾರವಾದ ಮೇಲೆ ಬರುವ ಜ್ಞಾನ ಇದಕ್ಕಿಂತಲೂ ಬೇರೆಯಾಗಿರುವುದು.

ನಾಗಮಹಾಶಯರು ಏನನ್ನು ಹೇಳುತ್ತಿದ್ದರು ಜ್ಞಾಪಕವಿದೆಯೇ? "ಕೀರ್ತಿಯನ್ನು ಗಳಿಸುವುದು ಅದನ್ನು ತ್ಯಜಿಸುವುದಕ್ಕಿಂತ ಸುಲಭ. ಯಾರು ಅದನ್ನು ತ್ಯಜಿಸಬಲ್ಲರೋ ಅವರು ನಿಜವಾಗಿಯೂ ಮಹಾತ್ಮರು" ಅವರು "ಕಟ್ಟಿದ ದೋಣಿ ಮುಂದೆ ಹೋಗಲಾರದು" ಎನ್ನುತ್ತಿದ್ದರು. ಅಂದರೆ ಯಾರ ಮನಸ್ಸು ಕಾಮ ಕಾಂಚನದಲ್ಲಿ ತಲ್ಲೀನವಾಗಿರುವುದೋ ಅವರು ಆ ವ್ಯಾಮೋಹದಿಂದ ಪಾರಾಗುವ ತನಕ ದೇವನಕಡೆ ತಿರುಗಲಾರರು. ದೇವರು ಮತ್ತು ಭೋಗಾನ್ವೇಷಣೆ ಎರಡೂ ಒಟ್ಟಿಗೇ ಹೋಗಲಾರದು. ನಿನಗೆ ಒಂದು ಬೇಕಾದರೆ ಮತ್ತೊಂದನ್ನು ತ್ಯಜಿಸಬೇಕು.

ಮಾನವಜನ್ಮ ದೊರಕುವುದು ಅತಿಕಷ್ಟ. ಅದನ್ನು ಪಡೆದೂ ದೇವರನ್ನು ನೋಡಲು ಇಚ್ಛಿಸದೇ ಇದ್ದರೆ ನಿರ್ಭಾಗ್ಯ ನೀನು. ನೀನು ಮನುಷ್ಯ ಜೀವನ ಪಡೆದು ವ್ಯರ್ಥವಾಯಿತು. ಶ್ರೀಶಂಕರಾಚಾರ್ಯರು "ಮಾನವ ಜನ್ಮ, ಮೋಕ್ಷಾಕಾಂಕ್ಷೆ, ಸಾಧುಸಂಗ ಇವು ಮೂರು ಪ್ರಪಂಚದಲ್ಲಿ ದೊರಕುವುದು ಬಹಳ ಅಪರೂಪ. ಈ ಮೂರೂ ಯಾರಪಾಲಿಗೆ ದೊರೆತಿದೆ ಅವರೇ ಪುಣ್ಯವಂತರು" ಎಂದು ಹೇಳುವರು.

ಶಿಷ್ಯ :–ಭಗವಂತನಮೇಲೆ ಮನಸ್ಸನ್ನು ಅಂತರ್ಯದಲ್ಲಿ ತಿರುಗಿಸ ಬೇಕಾದರೆ ಕಾಲಾವಕಾಶವಾದಂತೆ ಒಂದುದಿನವೊ, ತಿಂಗಳೊ, ವರ್ಷವೊ ನಿರ್ಜನಪ್ರದೇಶಕ್ಕೆ ಹೋಗಬೇಕೆಂದು ಪರಮಹಂಸರು ಹೇಳುವರು. ನೀವು ಸಾಧುಸಂಗವನ್ನು ಹೇಳುವಿರಿ. ನಾವು ಸಾಧುಸಂಗ, ಅಥವಾ ನಿರ್ಜನಪ್ರದೇಶ ಯಾವುದನ್ನು ಅರಸಬೇಕು ?

ಸ್ವಾಮಿಜಿ :-ಎರಡೂ ಸತ್ಯ. ಎರಡನ್ನೂ ಅನುಸರಿಸಬೇಕು. ಮೊದಲೇ ಸಾಧಕ ಏಕಾಂತಕ್ಕೆ ಹೋಗಕೂಡದು. ಇದರಿಂದ ಬಹಳ ಅಪಾಯವಿದೆ. ಹಲವರು ಮನುಷ್ಯಸಂಪರ್ಕದಿಂದ ಪಾರಾಗಲು ಯತ್ನಿಸಿ ಹುಚ್ಚರಾಗಿ ಹೋಗಿರುವರು. ಆದಕಾರಣವೇ ತುಂಬಾ ಜೋಪಾನವಾಗಿ ರಬೇಕು. ಆಧ್ಯಾತ್ಮಿಕಜೀವನದಲ್ಲಿ ಮೊದಲು ಸ್ವಲ್ಪ ಮುಂದುವರಿದಮೇಲೆ ಮಾತ್ರ ಅಪಾಯವಿಲ್ಲದೆ ನಿರ್ಜನತೆಯನ್ನು ಇಚ್ಛಿಸಬಹುದು. ಈ ಪ್ರಪಂಚ ದಲ್ಲಿ ನಿಜವಾದ ನಿರ್ಜನಪ್ರದೇಶ ಎಲ್ಲಿಯೂ ದೊರಕುವುದಿಲ್ಲ. ಕಾಲ, ದೇಶ, ಕಾರ್ಯ–ಕಾರಣಪ್ರಪಂಚದಲ್ಲಿ ಅದು ದೊರಕಲಾರದು. ಅದು ಮನಸ್ಸಿನ ಆಚೆ, ಬುದ್ಧಿಯ ಆಚೆ ಇರುವುದು. ಅದನ್ನು ಸಮಾಧಿಯಲ್ಲಿ ಮಾತ್ರ ಅನುಭವಿಸಬಹುದು. ಅದು ಪೂರ್ಣಾವಸ್ಥೆಗೆ ಸಮ.

೧೮

## ಮಹಾಪುರುಷರ ಉದಾಹರಣೆ

ಸ್ವಾಮಿಜಿ :-ನೀವು ಎಷ್ಟು ಓದಿದರೂ ಕೇಳಿದರೂ ಸಾಧುಸಂಗದಲ್ಲಿದ್ದು ದರಿಂದ ಮನಸ್ಸಿನಮೇಲೆ ಆಗುವಷ್ಟು ಪರಿಣಾಮ ಮತ್ತು ಉಪಯೋಗ ಬೇರೆ ಯಾವುದರಿಂದಲೂ ಆಗುವುದಿಲ್ಲ. ಪ್ರತಿದಿನವೂ ಅವರನ್ನು ನೋಡಿ ನಾವು ಕಲಿಯುವೆವು. ಉದಾಹರಣೆಗೆ ಒಬ್ಬ ಭಕ್ತನ ಜೀವನದ ಒಂದು ಪ್ರಸಂಗವನ್ನು ಹೇಳುತ್ತೇನೆ. ಅಧರ್‌ಸೇನ್ ಶಾಲೆಯ ಇನ್‌ಸ್ಪೆಕ್ಟರ್ ಆದ ತನ್ನ ಸ್ನೇಹಿತನೊಬ್ಬನೊಂದಿಗೆ ಶ್ರೀರಾಮಕೃಷ್ಣರನ್ನು ನೋಡಲು ಹೋದನು. ಈ ಸ್ನೇಹಿತ ಕೆಲವುವೇಳೆ ಒಂದು ವಿಧವಾದ ಭಾವಕ್ಕೆ ವಶನಾಗಿ ಬಾಹ್ಯಪ್ರಜ್ಞೆಯನ್ನೆಲ್ಲಾ ಕಳೆದುಕೊಳ್ಳುತ್ತಿದ್ದನು. ಜನರು ಇದನ್ನು ಭಾವ ಎಂದು ಕರೆಯುತ್ತಿದ್ದರು. ಒಂದುದಿನ ಇವರು ಬಂದ ಸಮಯದಲ್ಲಿ ಶ್ರೀರಾಮಕೃಷ್ಣರು ಸಮಾಧಿಮಗ್ನರಾದರು. ಅವರ ಮೊಗದಿಂದ ಪರಮಹಂಸರು ತಾವು ಅನುಭವಿಸುತ್ತಿದ್ದ ದೈವೀ ಆನಂದದ ಚಿಹ್ನೆ ತೋರುತ್ತಿತ್ತು. ಇದನ್ನು ನೋಡಿ ಅಧರ್‌ಬಾಬು "ನೋಡು ಗೆಳೆಯ, ನಿನ್ನ ಭಾವ ನಿಜವಾದ ಭಾವವಲ್ಲ. ನಿನಗೆ ಯಾವಾಗ ಇದು

ಆಗುವುದೋ ಆಗ ಯಾವುದೋ ಒಂದು ವ್ಯಥೆಗೆ ಈಡಾದಂತೆ ಕಾಣುವಿ. ಭಗವಂತನ ಸಂಬಂಧದಿಂದ ಯಾವ ಯಾತನೆಯೂ ಬರಲಾರದು. ಪರಮ ಹಂಸರಲ್ಲಿ ಕಾಣುವ ಆನಂದಪ್ರವಾಹದಿಂದ ನನ್ನ ಕಣ್ಣು ಇಂದು ತೆರೆ ಯಿತು " ಎಂದನು.

ಯಾವಾಗಲೂ ಮೌನವಾಗಿದ್ದ, ಕಾಶಿಯಲ್ಲಿದ್ದ, ತ್ರೈಲಿಂಗಸ್ವಾಮಿ ಯನ್ನು ಒಬ್ಬನು ನೋಡಿದನು. ಅವನು ಹಿಂತಿರುಗಿದಮೇಲೆ " ನಾನು ಅವರ ಸಮೀಪಕ್ಕೆ ಹೋದೆ. ಆದರೆ ಅವರು ಮಾತನಾಡಲಿಲ್ಲ. ಅಂತಹ ಕಡೆಗೆ ಹೋಗಿ ಪ್ರಯೋಜನವೇನು ? " ಎಂದು ಆಲೋಚಿಸಿದನು. ಅಂತೂ ಎರಡನೇ ವೇಳೆಯೂ ಅವರನ್ನು ನೋಡಲು ಹೋದನು ಈಸಲ ಸ್ವಾಮಿಜಿಯವರ ಸಮ್ಮುಖದಲ್ಲಿ ಕುಳಿತೊಡನೆಯೆ ಅವರು ಮೊದಲು ತುಂಬಾ ಅತ್ತು ನಕ್ಕರು. ಭಕ್ತ್ಯೋನ್ಮತ್ತನಂತೆ ಕಾಣುತ್ತಿದ್ದರು. ಇದನ್ನು ನೋಡಿ ಅವರು " ನಾನು ಇಂದು ಕಲಿತುದನ್ನು ಸಾವಿರ ಪುಸ್ತಕ ಕಲಿಸಲಾರವು. ನಾನು ಹಾಗೆ ಅತ್ತರೆ ದೇವರು ದೊರಕುವನು. ಅವನ ಕೃಪೆದೊರತಮೇಲೆ ಮಾತ್ರ ಅಂತಹ ಆನಂದಾನುಭವ ದೊರಕುವುದು " ಎಂದುಕೊಂಡನು.

ಶಿಷ್ಯ . ಸಾಧುಪುರುಷರನ್ನು ನೋಡಿದರೆ ಸಾಕೆಂದು ಹಲವರು ಹೇಳುವರು. ಅವರನ್ನು ಪರೀಕ್ಷಿಸುವುದಾಗಲಿ, ಕೇಳುವುದಾಗಲಿ ಆವಶ್ಯಕ ವಿಲ್ಲವೆಂದು ಹೇಳುವರು. ನಾವು ಇದನ್ನು ನಂಬಬೇಕೆ?

ಸ್ವಾಮಿಜಿ : ಇಲ್ಲ, ಎಂದಿಗೂ ಇಲ್ಲ. ಅವರೊಂದಿಗೆ ಬಹಳ ಸಲಿಗೆ ಯಿಂದ ವರ್ತಿಸಬೇಕು. ನಿಮ್ಮ ಮನಸ್ಸಿನಲ್ಲಿ ಯಾವುದಾದರೂ ಸಂಶಯ ವೆದ್ದರೆ, ಅದನ್ನು ನೀವೇ ಬಗೆಹರಿಸಲು ಆಗದೇ ಇದ್ದರೆ, ಅವರಿಗೆ ನಿಸ್ಸಂ ಕೋಚವಾಗಿ ಹೇಳಿ ನಿವಾರಿಸಿಕೊಳ್ಳಲು ಯತ್ನಿಸಿ. ವಿಶದವಾಗಿ ಅವರ ಜೀವನವನ್ನು ಗಮನಿಸಬೇಕು. ಅವರಂತೆ ನಿಮ್ಮ ಜೀವನವನ್ನೂ ತಿದ್ದಿಕೊಳ್ಳಬೇಕು.

ಶಿಷ್ಯ : ತಾತ್ಕಾಲಿಕ ಉತ್ಸಾಹದಿಂದ ಏನೂ ಪ್ರಯೋಜನವಿಲ್ಲ. ಆತ್ಮಸಾಕ್ಷಾತ್ಕಾರಕ್ಕೂ ಕಾಲಬೇಕು ಎಂದು ನೀವೇ ಹೇಳಿದಿರಿ. ಅದಕ್ಕೆ ಸಾಕ್ಷಾತ್ಕಾರ ಪಡೆಯಬೇಕೆಂಬ ಆಸೆಯನ್ನು ತೊರೆಯಬೇಕೆ ?

ಸ್ವಾಮಿಜಿ : ಮತ್ತಾವ ವಿಷಯವನ್ನೊ ಮಾತನಾಡುತ್ತಿದ್ದಾಗ ನಾನು ಹಾಗೆ ಹೇಳಿರಬಹುದು. ತಾತ್ಕಾಲಿಕ ಉತ್ಸಾಹವೆಂದರೆ ಎಲ್ಲೊ ಒಂದೆರಡು ದಿನ ಭಕ್ತಿಪರವಶತೆಯಿಂದ ಕುಣಿದಾಡುವುದು ; ಇದ್ದಕ್ಕೆ ಇದ್ದಂತೆಯೆ ಏಳುವ ಆಂತರಿಕ ಉದ್ವೇಗವನ್ನು ಬಾಹ್ಯದಲ್ಲಿ ಪ್ರದರ್ಶಿಸುವುದು. ಇವು

ಬಹಳ ಬೇಗ ಮಾಯವಾಗುವುದು. ನಂತರ ನಿರಾಶೆಯಿಂದ ಕುಗ್ಗಿ ಇದನ್ನು ಬಿಟ್ಟೇಬಿಡುವನು.

ಶಿಷ್ಯ : ಬಾವಿ ತೋಡುವುದಕ್ಕೆ ಸ್ಥಳವನ್ನು ಪದೇ ಪದೇ ಬದಲಾಯಿಸುತ್ತಿದ್ದರೆ ನಿನಗೆ ನೀರು ಸಿಕ್ಕುವುದಿಲ್ಲವೆಂದು ಪರಮಹಂಸರು ಹೇಳುತ್ತಿದ್ದರು. ಇದನ್ನೇ ನೀವು ಹೇಳುವುದು.

ಸ್ವಾಮಿಜಿ: ಹೌದು, ದೃಢತೆ ಬೇಕಾಗಿರುವುದು. ಭಗವಂತನ ಮೇಲಿನ ಪ್ರೇಮದಿಂದ ಅಸ್ಥಿರವಾದರೆ ಅವನನ್ನು ಪಡೆಯದೇ ಇದ್ದರೂ ಅವನು ನಾಸ್ತಿಕನಾಗಲಾರ. ಅವನನ್ನು ಪಡೆಯದೆ ಕೋಟ್ಯಾಂತರ ಜನ್ಮಗಳು ಕಳೆಯಬಹುದು. ಆದರೂ ಅವನು ಬಿಡದೆ ಸ್ಥಿರವಾಗಿ ದೇವರನ್ನು ಕರೆಯುವನು.

ಸ್ವಲ್ಪ ಕುಂಡಲಿನಿ ಜಾಗ್ರತವಾಗುವುದು ಬಹಳ ಅಪಾಯಕರವೆಂದು ಸ್ವಾಮಿವಿವೇಕಾನಂದರು ಹೇಳುತ್ತಿದ್ದರು. ಅದು ಮೇಲಕ್ಕೆ ಎದ್ದು ಹೋಗುವವರೆವಿಗೂ ಕಾಮಕ್ರೋಧಾದಿಗಳು ಮತ್ತೂ ತೊಂದರೆಕೊಡುವುವು. ವೈಷ್ಣವರ ಮಧುರಭಾವ ಮತ್ತು ಸಖೀಭಾವ ಬಹಳ ಅಪಾಯಕರ. ರಾಧಾಕೃಷ್ಣರ ಲೀಲೆಯನ್ನು ಸ್ಮರಿಸುವಾಗ ತಮ್ಮ ಕಾಮವನ್ನು ಗೆಲ್ಲಲಾರದೆ ಹಲವು ಅಶ್ಲೀಲಕೃತ್ಯಗಳನ್ನು ಮಾಡುವರು. ಆದಕಾರಣವೆ ಪ್ರಾರಂಭದಲ್ಲಿ ರಾಸಲೀಲ ಮುಂತಾದುವನ್ನು ಓದಕೂಡದೆಂದು ನಿಷೇಧ.

ಧ್ಯಾನ ಸುಲಭವಲ್ಲ. ಸ್ವಲ್ಪ ಜಾಸ್ತಿ ತಿಂದರೂ ಮನಸ್ಸನ್ನು ನಿಗ್ರಹಿಸುವುದು ಕಷ್ಟ. ಕಾಮಕ್ರೋಧಾದಿ ಮೋಹಗಳನ್ನು ನಿಗ್ರಹಿಸುವ ತನಕ ಧ್ಯಾನ ಸಾಧ್ಯವಿಲ್ಲ. ಇದರಲ್ಲಿ ಯಾವುದಾದರೊಂದು ಮೇಲೆದ್ದರೂ ಧ್ಯಾನ ಅಸಾಧ್ಯ. ಉರಿಯುತ್ತಿರುವ ಬೆಂಕಿಯ ಮಧ್ಯದಲ್ಲಿ ಕುಳಿತುಕೊಳ್ಳುವುದು ಸುಲಭ. ಆದರೆ ಕಾಮವನ್ನು ಗೆದ್ದು ಅದರ ಪ್ರಭಾವಕ್ಕೆ ಬೀಳದಂತೆ ಇರುವುದು ನಿಜವಾದ ತಪಸ್ಯ. ಹೇಡಿಗಳಿಗೆ ಎಂತಹ ಧರ್ಮವಿರಬಲ್ಲುದು? ಕಾಮಾದಿಗಳನ್ನು ಗೆಲ್ಲುವುದೇ ಮಹಾತಪಸ್ಸು. ಪ್ರಾಪಂಚಿಕರು ಯಾವಾಗಲೂ ಅಸಾಧುಕರ್ಮದಲ್ಲಿ ನಿರತರಾಗಿರುವುದನ್ನು ನೋಡುವಾಗ ನಿಮ್ಮ ಮನಸ್ಸಿನಲ್ಲಿ ಯಾವಾಗಲಾದರೊಮ್ಮೆ ಹೀನ ಆಲೋಚನೆ ಎದ್ದರೆ ಅದೇನು ಮಹಾಪಾಪವಲ್ಲ. ಅವನ್ನು ಹೊರದೂಡಿ.

ಧ್ಯಾನವಿಲ್ಲದೆ ಮನಸ್ಸು ಸ್ಥಿರವಾಗಲಾರದು. ಸ್ಥಿರಮನಸ್ಸಿಲ್ಲದೆ ಆಧ್ಯಾತ್ಮಿಕಜೀವನ ಅಸಾಧ್ಯ. "ಮನಸ್ಸು ಸಮಾಧಾನವಾದಮೇಲೆ ಧ್ಯಾನ ಮಾಡುತ್ತೇನೆ" ಎಂದು ಆಲೋಚಿಸುವುದು ಒಂದು ಭ್ರಾಂತಿ. ಧ್ಯಾನ, ಸಮಾಧಾನಗಳೆರಡೂ ಒಂದನ್ನೊಂದು ಅನುಸರಿಸಿಕೊಂಡು ಹೋಗಬೇಕು,

ವ್ಯಾಪಾರದ ಬುದ್ಧಿ ನಮ್ಮಲ್ಲಿರುವತನಕ ನಾವು ಶ್ರೀರಾಮಕೃಷ್ಣರನ್ನು ಪ್ರೀತಿಸಲಾರೆವು. ಆದಕಾರಣವೇ ಸ್ವಲ್ಪ ಪ್ರಾರ್ಥನೆ ಮಾಡಿದ ಮೇಲೆ ಅವರನ್ನು ಕಾಣದೆಇದ್ದರೆ ನಿರಾಶರಾಗುವೆವು. ನಮ್ಮ ಹೃದಯ ಭಾವನೆಗಳನ್ನು ವ್ಯಕ್ತಪಡಿಸುವುದು ಹಿತವಲ್ಲ. ಅದು ಪ್ರೇಮದ ತೀವ್ರತೆಯನ್ನು ತಗ್ಗಿಸುವುದು.

## ೧೯

## ಧ್ಯಾನ

ಶಿಷ್ಯ :-ಭಗವದನುರಾಗವನ್ನು ನಾವು ಹೇಗೆ ವೃದ್ಧಿಮಾಡುವುದು ?

ಸ್ವಾಮಿಜಿ :–ಗುರೂಪದೇಶ ಮತ್ತು ಸತ್ಸಂಗದ ಸಹವಾಸದಿಂದ, ಪರಿಶುದ್ಧವಾದ ಮನಸ್ಸಿನಿಂದ ಸಾಧನೆಮಾಡುವುದರಿಂದ. ಈ ಪ್ರಪಂಚದಲ್ಲಿ ಕದಿಯುವುದಕ್ಕೆ ಕೂಡ ಒಬ್ಬ ಗುರು ಬೇಕಾಗಿದೆ. ಪರಬ್ರಹ್ಮನ ಜ್ಞಾನವನ್ನು ಪಡೆಯುವುದಕ್ಕೆ ಗುರುವಿನ ಆವಶ್ಯಕತೆ ಎಷ್ಟು ಇರಬಹುದು.

ಶಿಷ್ಯ :-ಶಾಂತಿಯನ್ನು ಹೇಗೆ ಪಡೆಯುವುದು ?

ಸ್ವಾಮಿಜಿ :–ಶಾಂತಿ, ಭಗವದ್ಭಕ್ತಿ, ಶ್ರದ್ಧೆ ಎಲ್ಲಾ ಒಟ್ಟಿಗೆ ಬರುವುದು. ಮೊದಲೇ ಹೇಗೆ ಶಾಂತಿ ದೊರಕುವುದು ? ಮೊದಲು ಅವನನ್ನು ಕಾಣದೆ ಇರುವುದಕ್ಕೆ ವ್ಯಾಕುಲತೆ, ಕಾತುರ, ದಾರುಣವ್ಯಥೆಯಾಗಬೇಕು. ಬಾಯಾರಿಕೆ ಹೆಚ್ಚು ಆದಷ್ಟೂ ನೀರಿನ ರುಚಿ ಹೆಚ್ಚುವುದು. ಹೃದಯದಲ್ಲಿ ಒಂದು ಅತೃಪ್ತಿಯನ್ನು ಎಬ್ಬಿಸಬೇಕು. ನಮಗೆ ಪ್ರಪಂಚದಲ್ಲಿ ಸುಖ ಸಿಕ್ಕದೇ ಇರುವಾಗ ಅಸ್ಥಿರರಾಗಿ ದೇವರಮೇಲೆ ಆಸಕ್ತಿ ಹೆಚ್ಚುವುದು.

ಶಿಷ್ಯ :-ಭಗವದ್ಭಕ್ತಿ ಹೇಗೆ ವೃದ್ಧಿಯಾಗುವುದು ?

ಸ್ವಾಮಿಜಿ :–ಸಾಧನೆ, ಪ್ರಾರ್ಥನೆಯಿಂದ ; ಎಲ್ಲರೂ ಪಡೆದಿರುವುದು

ಶಿಷ್ಯ :-ಪ್ರಪಂಚದಲ್ಲಿ ಇದು ಸಾಧ್ಯವೆ ?

ಸ್ವಾಮಿಜಿ :–ಪ್ರಪಂಚದ ಹೊರಗೆ ಯಾರಾದರೂ ಇರುವರೆ ?

ಶಿಷ್ಯ :-ಅಲ್ಲ, ಸಂಸಾರದಲ್ಲಿದ್ದುಕೊಂಡು ಇದು ಸಾಧ್ಯವೆ?

ಸ್ವಾಮಿಜಿ :-ಸಾಧ್ಯ, ಆದರೆ ಕಷ್ಟ.

ಶಿಷ್ಯ :-ಪ್ರಪಂಚದಮೇಲೆ ಜಿಗುಪ್ಸೆ ಹುಟ್ಟಿದಾಗ ಅದನ್ನು ತೊರೆಯಬೇಕೆ ?

ಸ್ವಾಮಿಜಿ :-ಹೌದು. ಅದನ್ನೇ ನಿಜವಾದ ವೈರಾಗ್ಯವೆನ್ನುವುದು. ನಿಜವಾದ ವೈರಾಗ್ಯ ಬೆಂಕಿಯಂತೆ. ಅದೆಂದಿಗೂ ಆರುವುದಿಲ್ಲ. ಯಾವಾ

ಗಲೂ ವಿಸ್ತಾರವಾಗುತ್ತಾ, ಶಾಖವಾಗುತ್ತಾ ಬರುವುದು. ಮೀನನ್ನು ದೊಡ್ಡಕೊಳಕ್ಕೆ ಬಿಟ್ಟರೆ ಹೇಗೆ ಆನಂದದಿಂದ ಈಜುವುದೋ ಹಾಗೆಯೇ ಜೀವಿ ಪುನಃ ಪ್ರಪಂಚದ ಬಂಧನಕ್ಕೆ ಬೀಳಲು ಇಚ್ಛಿಸುವುದಿಲ್ಲ.

ಶಿಷ್ಯ :–ಗುರುವಿಲ್ಲದೆ ಇದು ಸಾಧ್ಯವೆ?

ಸ್ವಾಮಿಜಿ :-ಅಸಾಧ್ಯವೆಂದು ನಾನು ಊಹಿಸುವುದಿಲ್ಲ. ಗುರುವೆಂದರೆ ಮಂತ್ರೋಪದೇಶದ ಮೂಲಕ ಇಷ್ಟದೈವಕ್ಕೆ ದಾರಿತೋರುವವನು. ಹಲವು ಉಪಗುರುಗಳು ಇರಬಹುದು. ಆದರೆ ಪ್ರಮುಖಗುರು ಒಬ್ಬನೇ. "ಈ ಸಾಧನೆಯನ್ನು ಮಾಡು, ಮಹಾತ್ಮರೊಂದಿಗೆ ಬೆರೆ" ಎನ್ನುವನು. ಹಿಂದಿನಕಾಲದಲ್ಲಿ ಗುರುಗೃಹವಾಸ ರೂಢಿಯಲ್ಲಿತ್ತು. ಗುರು ಶಿಷ್ಯನನ್ನು ವಿಚಾರಿಸಿಕೊಳ್ಳುತ್ತಿದ್ದನು. ಶಿಷ್ಯ ಗುರುವಿಗೆ ಸೇವೆಮಾಡುತ್ತಿದ್ದನು. ಶಿಷ್ಯ ಅಡ್ಡದಾರಿ ಹಿಡಿದರೆ ಗುರು ಪುನಃ ಅವನನ್ನು ಸರಿಯಾದ ಹಾದಿಗೆ ತರುತ್ತಿದ್ದನು. ಬ್ರಹ್ಮಜ್ಞಾನಿ ಅಥವಾ ಸಾಧನೆಯಲ್ಲಿ ಬಹು ಮುಂದುವರಿದವನಲ್ಲದೆ ಬೇರೆಯವರನ್ನು ಗುರುಗಳಾಗಿ ಸ್ವೀಕರಿಸಬಾರದು.

ಶಿಷ್ಯ :-ಅವರನ್ನು ಹೇಗೆ ತಿಳಿದುಕೊಳ್ಳುವುದು ?

ಸ್ವಾಮಿಜಿ :-ಕೆಲವುದಿನ ಅವರೊಂದಿಗೆ ಅತಿ ನಿಕಟವಾಗಿ ವರ್ತಿಸಿದರೆ ಗೊತ್ತಾಗುವುದು. ಗುರುವೂ ಶಿಷ್ಯನಾಗುವವನನ್ನು ಪರೀಕ್ಷಿಸುತ್ತಾನೆ. ಶಿಷ್ಯನಿಗೆ ಭೋಗಾಸಕ್ತಿ ಬಲವಾಗಿದ್ದರೆ ಅದನ್ನು ನಿಗ್ರಹಿಸುವುದಕ್ಕೆ ಕಷ್ಟವಾದರೆ ಅವನಿಗೆ ಉಪದೇಶ ಕೊಡುವುದಿಲ್ಲ. ಅವನನ್ನು ತಿರಸ್ಕರಿಸುವನು. ಗುರು ಯಾರನ್ನು ಸ್ವೀಕರಿಸುವನೋ ಅವನನ್ನು ತನ್ನ ಸಮೀಪದಲ್ಲೇ ಇಟ್ಟುಕೊಂಡು ಪರೀಕ್ಷಿಸುವನು. ಕುಲಗುರುಗಳಿಗೆ ಒಂದು ಅನುಕೂಲವಿದೆ. ಶಿಷ್ಯನ ಮನೆಯ ವಿಚಾರವನ್ನೆಲ್ಲಾ ಆತ ಬಲ್ಲ.

ಮನಸ್ಸನ್ನು ಒಂದುಗೂಡಿಸುವುದಕ್ಕೆ ಪ್ರಾರ್ಥನೆ, ಪೂಜೆ, ಧ್ಯಾನ, ಏಕಾಗ್ರತೆ ಇವೆಲ್ಲ ಸಹಾಯಮಾಡುವುವು. ಪ್ರಾಣಾಯಾಮವೂ ಒಂದು ದಾರಿ. ಆದರೆ ಗೃಹಸ್ಥರಿಗೆ ಸುರಕ್ಷಿತವಲ್ಲ. ಇಂದ್ರಿಯಸ್ಖಲನೆಯಾದರೆ ಹಲವು ರೋಗಗಳು ಬರುವುವು. ಒಳ್ಳೆಯ ಆಹಾರ, ಸ್ಥಳ, ಶುದ್ಧವಾದ ಗಾಳಿ ಇವು ಆವಶ್ಯಕ. ಧ್ಯಾನಕ್ಕೆ ಬೇರೆ ಯಾವುದೂ ಆವಶ್ಯಕವಿಲ್ಲ. ಏಕಾಂತದಲ್ಲಿ ಧ್ಯಾನವನ್ನು ಅಭ್ಯಾಸಮಾಡಬೇಕು. ಎಲ್ಲೋ ಒಂದು ಗಂಟೆ ಅಥವಾ ಒಂದು ದಿನವಲ್ಲ. ಹಿತಕರವಾದ ವಾತಾವರಣವಿರುವ ಒಂದು ಒಳ್ಳೆಯ ಸ್ಥಳಸಿಕ್ಕಿದರೆ ಅಲ್ಲೇ ಪ್ರಾರಂಭಿಸು. ಅವನನ್ನು ಮಾತ್ರ ಅರಸು. ಕಾಮ ಕಾಂಚನವನ್ನು ತೊರೆ. ಮೊದಲು ಮನಸ್ಸಿನಲ್ಲಿ ತ್ಯಾಗ

ವನ್ನು ಅಭ್ಯಾಸಮಾಡು. ಮನಸ್ಸನ್ನು ಪ್ರಾಪಂಚಿಕವಸ್ತುಗಳಿಂದ ಹಿಂದಕ್ಕೆ ಸೆಳೆ.

ಮೊದಲು ಧ್ಯಾನ, ಸಾಕಾರವಾಗಿರಬೇಕು. ನಂತರ ನಿರಾಕಾರ, ಕೊನೆಗೆ ಅವನೊಬ್ಬನೇ ಸತ್ಯ ಉಳಿದುವೆಲ್ಲ ಮಿಥ್ಯವೆಂದು ಗೊತ್ತಾಗುತ್ತದೆ. ನಮಗೆ ಈಗ ಕಾಣುವ ಜಗತ್ತು ಒಂದು ಭ್ರಾಂತಿ ಸಮಾಧಿಯಲ್ಲಿ ಪ್ರಪಂಚವಿರುವುದಿಲ್ಲ. ಗಾಢನಿದ್ರೆಯಾದಮೇಲೆ ನಾನು ನಿಜವಾದ ಆನಂದವನ್ನು ಅನುಭವಿಸಿದೆ ಎಂದು ಹೇಳುವಂತೆ. ಸಮಾಧಿಯಿಂದ ಕೆಳಗಿಳಿದು ಬಂದಮೇಲೆ ಋಷಿಗಳಂತೆ ತನ್ನ ಅನುಭವವನ್ನು "ಆನಂದಮಯ ಅದು. ಮಾತು ಅದನ್ನು ವಿವರಿಸಲಾರದು. ನಾನು ನೀನು ಅದರಲ್ಲಿ ಮಾಯವಾಗುವುದು, ಸಚ್ಚಿದಾನಂದ ಒಂದೇ ಉಳಿಯುವುದು" ಎನ್ನುವನು.

ದೇವರಿರುವನು ಎನ್ನುವುದಕ್ಕೆ ಪ್ರಮಾಣವೇನೆಂದು ಕೇಳಿದರೆ ಉತ್ತರವೆ "ನಾನು ಅವನನ್ನು ನೋಡಿರುವೆನು. ನೀನು ಕೂಡ ನನ್ನನ್ನು ಅನುಸರಿಸಿದರೆ ನೋಡಬಹುದು." ಮಹಾತ್ಮರು; ಜಗದೋದ್ಧಾರಕರೆಲ್ಲ ಹೇಳುವುದು ಹೀಗೆ. ಶ್ರೀರಾಮಕೃಷ್ಣರು ಹೇಳುತ್ತಿದ್ದಂತೆ ಗಾಂಜ ಎಂದರೆ ಮತ್ತುಬರುವುದಿಲ್ಲ. ತಂದು ಕುಟ್ಟಿ ನೀರಿನಲ್ಲಿ ಬೆರಸಿ ಕುಡಿದು, ಸ್ವಲ್ಪ ಕಾಯಬೇಕು. ಆಗ ಮಾತ್ರ ಮತ್ತುಬರುವುದು. ಸುಮ್ಮನೆ ದೇವರೆ, ದೇವರೆ ಎಂದು ಕೂಗಿದರೆ ಪ್ರಯೋಜನವಿಲ್ಲ. ಸಾಧನೆಮಾಡಿ ಕಾಯಬೇಕು.

ಶಿಷ್ಯ: ಕೆಲವುವೇಳೆ ನಾನು ಜಪಮಾಡುವಾಗ ಎಲ್ಲವನ್ನೂ ಮರೆಯುತ್ತೇನೆ. ಅದೇನು?

ಸ್ವಾಮಿಜಿ: ಪಂಚದಶಿ ಇದೊಂದು ಆತಂಕವೆನ್ನುವುದು. ಧ್ಯಾನವೆಂದರೆ ದೇವರನ್ನು ಆಲೋಚಿಸುವುದು. ಇದು ತೀವ್ರವಾದರೆ ದೇವರ ದರ್ಶನವಾಗುವುದು, ಇದು ಸಮಾಧಿ. ಸಮಾಧಿ ಅನಂತರ ಈ ಆನಂದ ಕೆಲವುಕಾಲ ನಿಲ್ಲುವುದು. ಕೆಲವರು ಇದು ಎಂದೆಂದಿಗೂ ಇರುವುದು ಎಂದು ಹೇಳುವರು.

ಶ್ರೀ ಚೈತನ್ಯರು ರಮಾನಂದರ ಸಮೀಪಕ್ಕೆ ಒಬ್ಬರನ್ನು ಕಳುಹಿಸಿದರು. ರಮಾನಂದ ಸುಖಭೋಗದಲ್ಲಿದ್ದನು. ದೇವರ ಹೆಸರನ್ನು ಕೇಳಿದೊಡನೆಯೆ ಕಣ್ಣಿನಿಂದ ಭಕ್ತಿಚಿಲುವೆಯಂತೆ ನೀರು ಚಿಮ್ಮಿತು. ಏತಕ್ಕೆ ಇವನು ಅತ್ತನೊ ಅದು ಶಿಷ್ಯನಿಗೆ ಗೊತ್ತಾಗಲಿಲ್ಲ. ಒಬ್ಬನು ಸಾಧುವಲ್ಲದೇ ಇದ್ದರೆ ಇನ್ನೊಬ್ಬನನ್ನು ತಿಳಿಯಲಾರ. ಬದನೆಕಾಯಿ ಮಾರು

ವವನು ವಜ್ರದ ಬೆಲೆಯನ್ನು ತಿಳಿಯಲಾರ. ಸಾಧನೆಯಿಂದ ಯಾರು ಮೇಲೆ ಹೋಗಿರುವರೋ ಅವರು ಮಾತ್ರ ಭಕ್ತನನ್ನು ಅರಿಯುವರು.

ಧ್ಯಾನಮಾಡುವಾಗ ಆಸೆ ಮುಂತಾದ ಅರಿಷಡ್ವರ್ಗಗಳು ನನ್ನಲ್ಲಿ ಇಲ್ಲ ಎಂದು ಭಾವಿಸಬೇಕು. ಕ್ರಮೇಣ ಈ ಭಾವನೆ ಮನಸ್ಸಿಗೆ ಇಳಿಯುವುದು. ಈ ಆಲೋಚನೆಯನ್ನು ಹೊರದೂಡುವಾಗ ಸದಾಲೋಚನೆಯನ್ನು ಒಳಗೆ ಬಿಡು. ಧ್ಯಾನಮಾಡುವಾಗ ಯಾವುದಾದರೂ ಜ್ಯೋತಿ ಅಥವಾ ಧ್ವನಿಯನ್ನು ಕೇಳಿದರೆ ಸರಿಯಾದ ಮಾರ್ಗದಲ್ಲಿ ಹೋಗುತ್ತಿರುವೆ ಎಂದು ತಿಳಿ. ಆದರೆ ಇವು ಅಷ್ಟು ಮುಖ್ಯವಲ್ಲ. ಆದರೂ ಕೆಲವು ಚಿಹ್ನೆಗಳಾದುದರಿಂದ ಒಳ್ಳೆಯದು. ಏಕಾಂತಸ್ಥಳದಲ್ಲಿ ಧ್ಯಾನಮಾಡಿದರೆ ಪ್ರಣವಧ್ವನಿ, ಘಂಟಾನಾದ ಅಥವಾ ದೂರದಿಂದ ಬರುವ ಅನಾಹತ ಧ್ವನಿಯನ್ನು ಕೇಳಬಹುದು.

ಒಬ್ಬ ಮನುಷ್ಯನಿದ್ದ. ಧೀರನವನು. ಸಾಯುವುದಕ್ಕೆ ಹದಿನೈದು ನಿಮಿಷ ಮುಂಚೆ " ಗಂಗಾನದಿಯ ಸಮೀಪಕ್ಕೆ ನನ್ನನ್ನು ಕರೆದೊಯ್ಯಿರಿ. ನಾನು ಇಲ್ಲಿ ಸಾಯುವೆ ಎಂದು ತಿಳಿದಿರೇನು ?" ಎಂದನು. ಪಾವನನದಿಯನ್ನು ಸೇರಿದಮೇಲೆ "ಹೇಮಾತೆ! ನಾನು ಎಷ್ಟೋ ಪಾಪಮಾಡಿರುವೆನು. ಆದರೆ ನೀನು ಅದನ್ನೆಲ್ಲ ತೊಳೆಯಬಲ್ಲೆ ಎಂದು ನಂಬುತ್ತೇನೆ. ತಾಯಿ, ಉದ್ಧಾರಮಾಡು" ಎಂದು ಪ್ರಾಣಬಿಟ್ಟ.

## ೨೦

## ಭಗವದ್ದರ್ಶನ

ಸ್ವಾಮಿಜಿ : ಆರೋಗ್ಯಕರವಾದ ಶುದ್ಧಮನಸ್ಸು ಬೇಕಾಗಿದೆ. ಅವನ ಪಾದಪದ್ಮಗಳಲ್ಲಿ ರಕ್ಷೆ ಪಡೆ. ಆವಶ್ಯಕವಾಗಿರುವುದನ್ನೆಲ್ಲ ಅವನೇ ಮಾಡುವನು. ನಿಮ್ಮ ಮನಸ್ಸನ್ನು ಮಾತ್ರ ಅವನಮೇಲೆ ಇಟ್ಟಿರಬೇಕು. ಪ್ರಪಂಚದ ಆಸೆಯನ್ನು ತೊರೆಯಿರಿ. ಪ್ರಪಂಚ ಸುರಕ್ಷಿತ ಸ್ಥಳವಲ್ಲ. ಎಷ್ಟು ಆವಶ್ಯಕವೊ ಅದಕ್ಕಿಂತ ಹೆಚ್ಚು ಗಮನಕೊಡಬೇಡಿ. ಉಳಿದ ನಿಮ್ಮ ಜೀವನವನ್ನು ಭಗವಂತನಿಗೆ ಅರ್ಪಿಸಿ. ಇದನ್ನು ಮಾಡುವುದಕ್ಕೆ ನೀನು ಯೋಗ್ಯನೆಂದು ನಾನು ಹೇಳುತ್ತೇನೆ. ಪ್ರಯತ್ನಪಡು. ಜಯಶಾಲಿಯಾಗುವೆ. ಹೋರಾಡಿ, ಹೋರಾಡಿ. ಬಹಳ ಹೋರಾಡಬೇಕಾಗಿದೆ. ಈಕ್ಷಣವೇ ಪ್ರಾರಂಭಿಸಿ. ತಡಮಾಡಬೇಡಿ. ಸಂಶಯಬೇಡ, ಅನುಮಾನ ಬೇಡ. ಓ ಸಾಕ್ಷಾತ್ಕಾರದಿಂದ ಬರುವ ಆನಂದ ತೃಪ್ತಿ! ಅದು ಸ್ವಲ್ಪ ಪ್ರಾಪ್ತವಾದರೂ ಅಷ್ಟೇ ಸಾಕು. ಮಹಾಮಾಯೆಯಿಂದ ಪಾರಾಗುವುದಕ್ಕೆ

ಯತ್ನಿಸು. ಈ ಜನ್ಮದಲ್ಲೆ ಅದರಿಂದ ಪಾರಾಗಬೇಕು. ಪ್ರಯತ್ನಪಡಿ. ಇದು ನಿಜವಾಗಿಯೂ ಬಹಳ ಕಷ್ಟ ಕೆಲಸವೇನೋ ಸರಿ. ಶ್ರದ್ಧೆ, ದೃಢ ಶ್ರದ್ಧೆ, ಇರಬೇಕು. ಅದಿಲ್ಲದೇ ಇದ್ದರೆ ನೀನು ಗೆಲ್ಲಲಾರೆ. ಶಪಥಮಾಡು. ಸಂಶಯವನ್ನೆಲ್ಲ ಹೊರದೂಡು. ಆಗ ಮಾಯಾತೆರೆಯನ್ನು ಸೀಳಿ ಭಗವದ್ದರ್ಶನವನ್ನು ಪಡೆಯಬಹುದು. ಶ್ರದ್ಧೆಯೊಂದೇ ಉಪಾಯ. ಅದನ್ನು ಎಲ್ಲಾ ವಿಧದಿಂದಲೂ ಬಲಗೊಳಿಸು.

ಶಿಷ್ಯ : ಕೆಲವುವೇಳೆ ಸಂಶಯಬಂದರೆ ಏನುಮಾಡಲಿ ?

ಸ್ವಾಮಿಜಿ : ಭಗವಂತನ ಸಾಕ್ಷಾತ್ಕಾರವಾಗುವವರೆಗೆ ಅಚಲಶ್ರದ್ಧೆ ಬರಲಾರದು. ಆತನ ದರ್ಶನ ಪಡೆದಮೇಲೆ ಮಾತ್ರ ಸಾಧ್ಯ. ಅಲ್ಲಿಯವರೆಗೂ ನಿಜವಾದ ಶ್ರದ್ಧೆಯ ಸಮೀಪಕ್ಕೆ ಹೋಗಬಹುದು. ಹೆಚ್ಚಿಗೆ ಇಲ್ಲ. ಸಂಶಯ ಯಾವಾಗ ನಿನ್ನ ಮನಸ್ಸಿನ ಸಮತ್ವವನ್ನು ಚಂಚಲಗೊಳಿಸುವುದೊ, ಆಗ ಭಗವಂತನನ್ನು ನಂಬಿ ಪ್ರಾರ್ಥಿಸು. ನೀನು ಪುನಃ ಪುನಃ ಹೀಗೆ ಮಾಡಿದರೆ ನಿನ್ನ ನಂಬಿಕೆ ದೃಢವಾಗುತ್ತ ಬರುವುದು. ಸಂಶಯ ಬಂದೇ ಬರುವುದು. ಆದರೆ ಅದನ್ನು ಹೀಗೆ ಆಚೆಗೆ ಅಟ್ಟು : ನಿನ್ನಲ್ಲಿ “ ದೇವರು ಇರುವನು. ಆದರೆ ನನ್ನ ಪೂರ್ವ ಸಂಸ್ಕಾರದ ಮೋಡದಿಂದ ಅವನನ್ನು ನೋಡಲು ಆಗಲಿಲ್ಲ. ಅವನ ಕೃಪೆ ಪ್ರಾಪ್ತವಾದೊಡನೆ ಅವನನ್ನು ನೋಡಬಹುದು ” ಎಂದು ಆಲೋಚಿಸು. ಶ್ರದ್ಧೆಯನ್ನು ಕಳೆದುಕೊಳ್ಳಬೇಡಿ. ಎಲ್ಲಾ ಸ್ಥಿತಿಯಲ್ಲಿಯೂ ಅವನನ್ನೇ ನೆಚ್ಚಿಕೊಂಡಿರಿ.

ಈ ಸ್ಥೂಲಮನಸ್ಸು ದೇವರನ್ನು ತಿಳಿದುಕೊಳ್ಳಲಾರದು. ದೇವರು ಮನಸ್ಸಿನ ಆಚೆ, ಬುದ್ಧಿಯ ಆಚೆ, ಇರುವನು. ನೀನು ನೋಡುವ ಪ್ರಪಂಚ ಮನಸ್ಸಿನ ಎಲ್ಲೆಯೊಳಗೆ ಇದೆ. ಮನಸ್ಸೇ ಇದನ್ನು ಸೃಷ್ಟಿಸಿರುವುದು. ಮನಸ್ಸು ಇದನ್ನು ಮೀರಲಾರದು. ಸಾಧನೆಯಿಂದ ಸೂಕ್ಷ್ಮ ಮನಸ್ಸು ವಿಕಾಸವಾಗುವುದು. ಅದೇ ಆತ್ಮದ ಮನಸ್ಸು. ಅದು ಆಗಲೇ ನಿನ್ನಲ್ಲಿರುವುದು. ಆದರೆ ಇನ್ನೂ ಬೀಜಸ್ಥಿತಿಯಲ್ಲಿದೆ. ಕಾಲಕ್ರಮೇಣ ಈ ಬೀಜ ವಿಕಾಸವಾಗುವುದು. ಸ್ಥೂಲಮನಸ್ಸು ಸೂಕ್ಷ್ಮಕ್ಕೆ ಒಯ್ಯುವುದು. ಈ ಸಮಯದಲ್ಲೇ ಸೂಕ್ಷ್ಮ ಸತ್ಯದ ಅರಿವಾಗುವುದು. ವೈವಿಧ್ಯತೆಯಿಂದ ಕೂಡಿದ ಪ್ರಪಂಚ ಹೆಚ್ಚು ನಿನ್ನನ್ನು ಆಕರ್ಷಿಸಲಾರದು. ಭಗವಂತ ಮತ್ತು ಆತನ ಲೀಲೆಯನ್ನು ಧ್ಯಾನಮಾಡುವುದರಲ್ಲಿ ಹಗಲು ರಾತ್ರಿ ಕಳೆಯುವೆ.

ಸಮಾಧಿಯ ನಂತರ ಬರುವ ಸ್ಥಿತಿ. ಇದನ್ನು ವರ್ಣಿಸುವುದಕ್ಕೆ ಆಗು

ವುದಿಲ್ಲ. ಇದು ಸ್ಥೂಲಮನಸ್ಸಿನ ಆಚೆ ಇದೆ. ಭಾಷೆಯ ಎಲ್ಲೆಯನ್ನು ಮೀರಿರುವುದು. ಅಸ್ತಿ-ನಾಸ್ತಿಗಳ ಆಚೆ, ಸುಖ-ದುಃಖಗಳ ಆಚೆ, ಬೆಳಕು-ಕತ್ತಲೆಯಾಚೆ, ಎಲ್ಲಾ ದ್ವಂದ್ವಭಾವಗಳನ್ನು ಮೀರಿರುವುದು. ಆ ಧನ್ಯಾವಸ್ಥೆ ಎಂತಹುದು ಎಂಬುದನ್ನು ವಿವರಿಸುವುದಕ್ಕೆ ಮಾನವಭಾಷೆಗೆ ಸಾಧ್ಯವಿಲ್ಲ.

"ವೇದ ತ್ರಿಗುಣಗಳನ್ನು ಹೇಳುವುದು. ಅರ್ಜುನ, ನೀನು ಗುಣಗಳನ್ನು ಮೀರು'' ಎಂದು ಶ್ರೀಕೃಷ್ಣ ಅರ್ಜುನನಿಗೆ ಹೇಳುವನು. ನಿನಗೆ ದೇವರು ಬೇಕಾದರೆ ಗುಣವನ್ನು ಅತಿಕ್ರಮಿಸಬೇಕು. ಜಗಳ, ಕದನ, ದ್ವೇಷ, ಅಸೂಯೆ, ಅಹಂಕಾರ, ಡಂಬ ಇವು ತಮೋಗುಣದ ಲಕ್ಷಣ. ರಜೋಗುಣ ಮನುಷ್ಯನನ್ನು ಚಟುವಟಿಕೆಯಲ್ಲಿ ನಿರತನಾಗುವಂತೆ ಮಾಡುವುದು. ಕೀರ್ತಿಯ ಆಸೆಯನ್ನು ಹುಟ್ಟಿಸುವುದು. ರಜೋಗುಣದವನು ಅರ್ಧಗಂಟೆ ಧ್ಯಾನಮಾಡಿ ಸುತ್ತಲೂ ನೋಡುವನು. ಯಾರಾದರೂ ತನ್ನನ್ನು ನೋಡಿರುವರೇ ಎಂದು. ಯಾರೂ ಅದನ್ನು ನೋಡದೆ ಇದ್ದರೆ ತಾನು ಮಾಡಿದ ಅರ್ಧಗಂಟೆ ಧ್ಯಾನ ವ್ಯರ್ಥವೆಂದು ತಿಳಿಯುವನು! ಜನರ ಹೊಗಳಿಕೆಗೆ ಗುಲಾಮನಿವನು. ನಂತರ ಸತ್ತ್ವಬರುವುದು. ವೇದ ಈ ಗುಣಗಳನ್ನು ವಿವರಿಸುವುದು. ನಾವು ಇಲ್ಲೇ ನಿಲ್ಲಕೂಡದು ಇದನ್ನು ಮೀರಿ ಹೋಗಬೇಕು.

ಶಿಷ್ಯ :- ಈ ಪ್ರಪಂಚದಲ್ಲಿ ಕೆಲವು ನಮ್ಮ ಕರ್ತವ್ಯಗಳೆಂದು ತೋರುವುವು. ಅದನ್ನು ಹೇಗೆ ನಾವು ಮಾಡುವುದು ?

ಸ್ವಾಮಿಜಿ :—"ಈ ಪ್ರಪಂಚ ಭಗವಂತನದು. ಅದರಲ್ಲಿರುವ ಯಾವುದನ್ನೂ ನನ್ನದೆಂದು ಹೇಳಲಾಗುವುದಿಲ್ಲ. ಅವನು ನನ್ನ ಮೂಲಕ ಕೆಲಸವನ್ನು ಮಾಡುತ್ತಿರುವನು. ನಿಜವಾಗಿ ಯಾವುದೂ ನನಗೆ ಸೇರಿಲ್ಲ". ಯಾವುದನ್ನು ನಿನ್ನ ಕರ್ತವ್ಯವೆಂದು ಭಾವಿಸುವೆಯೊ ಅದನ್ನು ಈ ದೃಷ್ಟಿಯಿಂದ ಮಾಡಿದರೆ ಅಪಾಯವಿಲ್ಲ. ಕರ್ಮ ನಿನ್ನನ್ನು ಬಂಧಿಸುವುದಿಲ್ಲ. " ಇದು ನನಗೆ ಸೇರಿದ್ದು. ಅದು ನನ್ನದು" ಎಂಬ ಭಾವವನ್ನು ಮನಸ್ಸಿನಿಂದ ಆಚೆಗೆ ಅಟ್ಟು. ಅದರ ಬದಲು " ಎಲ್ಲಾ ಭಗವಂತನದು. ನಾನು ಅವನಿಗೆ ಸೇರಿದವನು, ಅವನಿಚ್ಛೆಯಂತೆ ನಾನು ಇಲ್ಲಿರುವೆನು, ಅವನು ಇಚ್ಛೆ ಪಟ್ಟೊಡನೆಯೆ ನನ್ನನ್ನು ತೆಗೆಯುವನು". ಇದೇ ನಿನ್ನ ಜೀವನದ ನಿಯಮವಾಗಿರಲಿ. ಪ್ರಪಂಚದ ವಸ್ತುಗಳೊಡನೆ ತಾದಾತ್ಮ್ಯಭಾವವನ್ನು ತರಬೇಡ.

ಈ ದೃಷ್ಟಿಯಿಂದ ಕರ್ತವ್ಯವನ್ನು ಮಾಡಿ. ಅದನ್ನು ಚೆನ್ನಾಗಿ

ಮಾಡಿ. ಜನರು ನಿಮ್ಮಲ್ಲಿ ತಪ್ಪು ಕಂಡುಹಿಡಿಯದೆ ಇರಲಿ. ಆದರೆ ಮನಸ್ಸಿನಲ್ಲಿ ಈ ಪ್ರಾಪಂಚಿಕವಸ್ತುಗಳಾವುವೂ ತನಗೆ ಸೇರಿಲ್ಲವೆಂದು ದೃಢವಾಗಿ ತಿಳಿದುಕೊಳ್ಳಿ. ದೇವರೇ ಕರ್ತ, ನೀನೇ ಯಂತ್ರ. ಯಾವುದು ಅವನ ಇಚ್ಛೆಯೋ ಅದನ್ನು ದೇವರು ನಿನ್ನ ಮೂಲಕ ಮಾಡಿಸುವನು.

ಶಿಷ್ಯ:-ಸ್ವಾಮಿಜಿ, ನಾನು ಈರೀತಿ ಕೆಲಸಮಾಡಬೇಕೆಂದು ಪ್ರಯತ್ನಿಸಿದಾಗ ಕೆಲವುವೇಳೆ ಮರೆತು, ಅಹಂಕಾರ ಹುಟ್ಟಿ, ಆಸಕ್ತಿ ಬೆಳೆದರೆ ಏನು ಮಾಡಬೇಕು?

ಸ್ವಾಮಿಜಿ:-ನಿರಾಶನಾಗಬೇಕಾಗಿಲ್ಲ. ಎಂದಿಗೂ ಅದಕ್ಕೆ ಅವಕಾಶ ಕೊಡಬೇಡ. ಕೆಲವುವೇಳೆ ಅದನ್ನು ಮರೆತರೆ ಚಿಂತೆಯಿಲ್ಲ. ಪುನಃ ಎರಡರಷ್ಟು ಛಲದಿಂದ ಅದನ್ನು ಪ್ರಾರಂಭಿಸಿ ಹಾಗೆ ಆಗದಂತೆ ನೋಡಿಕೊ. ಸಂಶಯ, ಗೊಂದಲ ಇವನ್ನು ದೇವರದರ್ಶನ ಪಡೆಯುವುದಕ್ಕೆ ಮುಂಚೆ ಯಾರು ಮೀರಬಲ್ಲರು? ಅವು ಬರುತ್ತವೆ, ಹೋಗುತ್ತವೆ. ಅವುಗಳ ಸ್ವಭಾವವೇ ಹಾಗೆ. ಆದರೆ ನಿರಾಶನಾಗಬೇಕಾಗಿಲ್ಲ. ನಿರಾಶೆ, ಸೋಲು, ಅನುಮಾನದಿಂದ ಪಾರಾಗು. ಎಂದಿಗೂ ರಾಜಿ ಮಾಡಿಕೊಳ್ಳಬೇಡ. ಅಮಿತ ಶಕ್ತಿ ಛಲಗಳಿರಲಿ. "ಮಾಡಬೇಕು, ಇಲ್ಲವೆ ಮಡಿಯಬೇಕು". ಇದು ನಿನ್ನ ಗುರಿಯಾಗಿರಲಿ. ದೇವರನ್ನು ನೀನು ಕಂಡೇಕಾಣಬೇಕು. ಈ ಜನ್ಮದಲ್ಲೇ ಕಾಣಬೇಕು. ಈ ಜೀವನದಲ್ಲಿ ಅವನನ್ನು ಪಡೆಯದಿದ್ದರೆ ನಿನ್ನ ದೇಹ, ಮನಸ್ಸು, ಜೀವನ ಎಲ್ಲಾ ವ್ಯರ್ಥ. "ನಾನು ದೇವರನ್ನು ನೋಡದೇಇದ್ದರೆ ಈ ಮನಸ್ಸಿನಿಂದ ಏನು ಪ್ರಯೋಜನ? ದೇಹದಿಂದ ಏನು ಪ್ರಯೋಜನ? ಅವು ನಾಶವಾದರೇನು? ಅವು ಇದ್ದರೆಷ್ಟು, ಹೋದರೆಷ್ಟು? ನಾನು ದೇವರನ್ನು ನೋಡಬೇಕು, ನೋಡಲೇಬೇಕು."

೨೧

## ಹಲವು ಬಗೆಯ ಸಾಧನ

ಶಿಷ್ಯ:-ಹಲವು ಬಗೆಯ ಪೂಜಾವಿಧಾನ, ಆಚಾರ, ದೇವ-ದೇವಿಯರು, ಇದರಲ್ಲಿ ಏನಾದರೂ ವಿಶೇಷವಿದೆಯೆ?

ಸ್ವಾಮಿಜಿ:-ಇವುಗಳ ಗುರಿ ಎಲ್ಲಾ ಒಂದೆ, ಅದೇ ಭಗವತ್ಸಾಕ್ಷಾತ್ಕಾರ. ಸ್ವಭಾವ ಮತ್ತು ಅಭಿರುಚಿಯಲ್ಲಿ ಒಬ್ಬರಿಗೂ ಮತ್ತೊಬ್ಬರಿಗೂ ಎಷ್ಟೋ ವ್ಯತ್ಯಾಸವಿದೆ. ಎಲ್ಲರಿಗೂ ಸಾಧನೆಗೆ ಒಂದೇ ಮಾರ್ಗವನ್ನು ತೋರುವುದಕ್ಕೆ ಆಗುವುದಿಲ್ಲ. ಪ್ರತಿಯೊಂದು ಸ್ವಭಾವದವರಿಗೂ ಬೇರೆ ಸಾಧನ, ಬೇರೆ ಬಗೆಯ ಪೂಜೆ ಆವಶ್ಯಕ. ಇದಕ್ಕಾಗಿ ಶಾಸ್ತ್ರ, ಸಾಧಕರ

ಶಕ್ತಿಗೆ ತಕ್ಕಂತೆ ಸಮಾಧಿ, ಧ್ಯಾನ, ಜಪ, ಪ್ರಾರ್ಥನೆ ಅಥವಾ ಬಾಹ್ಯ ಪೂಜೆಯನ್ನು ಹೇಳಿದೆ.

ಸಮಾಧಿಯೆ ಅತಿ ಉತ್ಕೃಷ್ಟಪೂಜೆ-ಪ್ರತ್ಯಕ್ಷ ಪರಬ್ರಹ್ಮನ ಪೂಜೆ ಇದು. ಸರ್ವವ್ಯಾಪಿಯಾದ ಪರಾತ್ಪರ ಸತ್ಯದರ್ಶನ ಇಲ್ಲಿ ಲಭಿಸುವುದು.

ಎರಡನೆಯದೆ ಧ್ಯಾನ. ಅಲ್ಲಿ ಎರಡು ವಸ್ತುಗಳಿವೆ. ದೇವರು ಮತ್ತು ನಾನು. ಇಲ್ಲಿ ಜಪ, ಪ್ರಾರ್ಥನೆ, ಪೂಜೆಗೆ ಅವಕಾಶವಿಲ್ಲ. ಧ್ಯಾನ ಗಾಢವಾದರೆ ಪವಿತ್ರ, ಪರಿಶುದ್ಧ ಇಷ್ಟದೇವತಾದರ್ಶನವಾಗುವುದು. ಇಲ್ಲಿ ಪ್ರಾರ್ಥನೆ ಮತ್ತು ಜಪಕ್ಕೆ ಎಡೆ ಇಲ್ಲ. ಇದಕ್ಕಿಂತ ಕೆಳಗಿನದೆ ಜಪ ಮತ್ತು ಪ್ರಾರ್ಥನೆ. ಇಷ್ಟದೇವತಾಮಂತ್ರವನ್ನು ಉಚ್ಚರಿಸುತ್ತಾ ಪ್ರಾರ್ಥಿಸುವನು. ಜೊತೆಗೆ ಆ ಪವಿತ್ರನಾಮದ ಹಿಂದೆ ಇರುವ ಮಂಗಳಾ ಕಾರವನ್ನು ಧ್ಯಾನಿಸುವನು.

ಕೊನೆಯದೇ ಬಾಹ್ಯಪೂಜೆ. ಇಲ್ಲಿ ಆ ಪರಾತ್ಪರ ವಸ್ತುವನ್ನು ವಿಗ್ರಹದ ಮೂಲಕ ಆರಾಧಿಸುವನು. ಹಲವು ಬಗೆಯ ಪೂಜಾ ವಿಧಾನ, ದೇವದೇವಿಯರು ಎಲ್ಲಾ ನಮ್ಮ ಮನೋಕಲ್ಪನೆ. ಭಗವಂತನೆಡೆಗೆ ಪ್ರಯಾಣಮಾಡುವಾಗ ಸಿಕ್ಕುವ ಬೇರೆ ಬೇರೆ ಹಂತವನ್ನು ಇವು ತೋರು ತ್ತವೆ. ಒಬ್ಬನು ಸಾಧನೆಮಾಡಬೇಕೆಂದಿರುವನು. ಅವನು ಈಗ ಏನು ಮಾಡಬೇಕು? ಎಲ್ಲಿಂದಲಾದರೂ ಪ್ರಾರಂಭಿಸಬಹುದೆ? ಇಲ್ಲ. ಅವನ ಮನಸ್ಸು ಎಲ್ಲಿದೆಯೊ ಅಲ್ಲಿಂದ ಹೊರಡಬೇಕು. ಗುರಿಸೇರುವವರೆಗೆ ಮೆಟ್ಟಿಲುಮೆಟ್ಟಿಲಾಗಿ ಹತ್ತಬೇಕು. ಸಾಧಾರಣ ಮನುಷ್ಯನನ್ನು ತೆಗೆದು ಕೊಳ್ಳಿ. ನಿರಾಕಾರಪರಬ್ರಹ್ಮನಮೇಲೆ ಧ್ಯಾನಮಾಡಿ, ಅಥವಾ ಸಮಾಧಿ ಅಭ್ಯಾಸಮಾಡಿ ಎಂದರೆ ಅದು ಸಾಧ್ಯವೆ? ಇದು ಅವನಿಗೆ ಅರ್ಥವಾಗು ವುದೂ ಇಲ್ಲ. ಇದರಮೇಲೆ ಆಸೆಯೂ ಅವನಿಗೆ ಹುಟ್ಟುವುದಿಲ್ಲ. ಇದರ ಪರಿಣಾಮವೆ ಸಾಧನೆಯನ್ನು ಅವನು ತೊರೆಯುವನು. ಅದಲ್ಲದೆ ಒಂದು ವಿಗ್ರಹಕ್ಕೆ ಹೂವು ತುಳಸಿಯಿಂದ ಪೂಜೆಮಾಡಿದರೆ ತಾನು ಏನೋ ಮಾಡಿರುವೆನು ಎಂಬ ತೃಪ್ತಿಯಾದರೂ ಬರುವುದು. ಕೊಂಚಕಾಲ ವಾದರೂ ಚಂಚಲಮನಸ್ಸು ನೆಮ್ಮದಿಯಾಗಿರುವುದು. ಏಕಾಗ್ರತೆಯಿಂದ ಪೂಜೆಯನ್ನು ಆನಂದಿಸುವನು. ಕ್ರಮೇಣ ಈ ಸ್ಥಿತಿಯಿಂದ ಅವನು ಪಾರಾಗುವನು.

ಮನಸ್ಸು ಸೂಕ್ಷ್ಮವಾದಷ್ಟೂ ಪ್ರಾಪಂಚಿಕವಸ್ತುವಿನಮೇಲೆ ಆಸಕ್ತಿ ಕಡಿಮೆಯಾಗುವುದು. ಬಾಹ್ಯಪೂಜೆಯನ್ನು ಈಗ ಪ್ರಾರಂಭಮಾಡಿದರೆ

ನಂತರ ಜಪ ಇದಕ್ಕಿಂತ ಉತ್ತಮವಾಗಿ ಕಾಣುವುದು. ಮಾನವ ವಿಕಾಸ ವಾಗುವ ಸ್ವಾಭಾವಿಕಮಾರ್ಗವೇ ಇದು. ಈ ವಿಕಾಸದಲ್ಲಿ ಯಾವ ಅನುಭವವನ್ನು ಮನಸ್ಸು ಪಡೆದುಕೊಂಡಿರುವುದೋ ಅದೆಂದಿಗೂ ನಾಶ ವಾಗುವುದಿಲ್ಲ ಮನಸ್ಸು ಇದನ್ನೆಲ್ಲಾ ಜ್ಞಾಪಕದ ಭಂಡಾರದಲ್ಲಿ ಶೇಖರಿಸಿಡುವುದು.

ಒಂದು ಉದಾಹರಣೆಯನ್ನು ತೆಗೆದುಕೊಳ್ಳಿ. ಅಂಗಳದಲ್ಲಿ ನಿಂತಿರು ವಿರಿ. ಮಾಳಿಗೆಯ ಮೇಲಕ್ಕೆ ಹೋಗಬೇಕೆಂದು ಇಚ್ಛೆ ಇದೆ. ನೀನು ಏನು ಮಾಡುವೆ? ಮೊದಲು ಮೆಟ್ಟಲು ಎಲ್ಲಿವೆ ಎಂದು ನೋಡಬೇಕು. ನಂತರ ಒಂದಾದ ಮೇಲೊಂದು ಮೆಟ್ಟಲು ಹತ್ತಿಹೋಗಬೇಕು. ಆಗ ಮೇಲೆ ಹೋಗುವಿ ಹಾಗಲ್ಲದೆ ಯಾರೋ ನಿನ್ನನ್ನು ಮೇಲಕ್ಕೆ ಎಸೆದರೆ ಅದರಿಂದ ನಿನಗೆ ಎಷ್ಟೋ ಅಪಾಯ ಮತ್ತು ಯಾತನೆಯಾಗಬಹುದು. ಕ್ರಮೇಣ ಹೋಗುವುದರಿಂದ ಅಪಾಯದಿಂದ ಪಾರಾಗಬಹುದು. ಅದ ರಂತೆಯೇ ಆಧ್ಯಾತ್ಮಿಕ ಜೀವನಕೂಡ. ಅದರೆಡೆಗೆ ಪ್ರಯಾಣಮಾಡುವಾಗ ಯಾವ ಅಪಾಯವೂ ಬರದೇಇರಲಿ ಎಂದೇ ಹಿಂದಿನ ಜ್ಞಾನಿಗಳು ನಮಗೆ ಕ್ರಮಕ್ರಮವಾಗಿ ಹೋಗಬೇಕೆಂದು ಹೇಳಿರುವರು. ಈ ಹಲವುಬಗೆಯ ಸಾಧನೆಯೆ ಆ ದಾರಿ. ಬಾಹ್ಯಪ್ರಪಂಚದಲ್ಲಿ ಆಗಲಿ, ಆಂತರಿಕ ಪ್ರಪಂಚ ದಲ್ಲಿ ಆಗಲಿ ದಾರಿ, ನಿಯಮ, ಒಂದೆ.

ಶಿಷ್ಯ :-ನನಗೆ ಚೆನ್ನಾಗಿ ಪರಿಚಯವಾದ ಚಂಚಲ ಆಲೋಚನೆ ಮನಸ್ಸಿನಲ್ಲಿ ಪದೇಪದೇ ಏಳುತ್ತಿದ್ದರೆ ಏನು ಮಾಡಬೇಕು? ಅದನ್ನು ನಿಗ್ರಹಿಸುವುದು ಹೇಗೆ?

ಸ್ವಾಮಿಜಿ :-"ಇದು ನನಗೆ ತುಂಬಾ ಅಪಾಯಕರ, ವಿನಾಶಕಾರಿ, ನನ್ನ ಪರಮಶತ್ರು" ಎಂಬ ಭಾವವನ್ನು ಮನಸ್ಸಿನಲ್ಲಿ ತೆಗೆದುಕೊಂಡುಬಾ. ಇಂತಹ ಒಂದು ಭಾವವನ್ನೇ ಮನಸ್ಸಿನಲ್ಲಿ ತಂದರೆ ಚಂಚಲ ಆಲೋಚನೆ ಬೇಗ ಮಾಯವಾಗುವುದು. ಇಲ್ಲಿ ಕುಳಿತಿರುವ ಒಬ್ಬ ಹುಡುಗನನ್ನು ತೆಗೆದುಕೊಳ್ಳಿ. "ಈ ಹುಡುಗ ಯಾರು? ನನಗೆ ಗೊತ್ತಿಲ್ಲ. ಇವನು ಯಾವ ಕೆಲಸಕ್ಕೂ ಪ್ರಯೋಜನವಿಲ್ಲ" ಎಂದು ಪದೇಪದೇ ಆಲೋಚಿಸು ತ್ತಿದ್ದರೆ ಆ ಹುಡುಗ ಹಾಗೆಯೇ ಆದಂತೆ ತೋರುವುದು. ಅವನಿಂದ ನಿನಗೆ ಯಾವ ಪ್ರಯೋಜನವೂ ಇಲ್ಲ. ನಿನ್ನ ಮನಸ್ಸು ಅವನ ಕಡೆಗೆ ಹೋಗುವುದಿಲ್ಲ. ಅದು ಏತಕ್ಕೆ? ಕಾರಣ, ಆ ಭಾವ ನಿನ್ನ ಮನಸ್ಸಿನಲ್ಲಿ ಬರುವಂತೆ ಮಾಡಿರುವೆ. ಇನ್ನೊಂದು ಉದಾಹರಣೆಯನ್ನು ತೆಗೆದು

ಕೊಳ್ಳಿ. ಒಂದು ಸಣ್ಣ ಮಗು ಇದೆ. ವಿಷ ತೆಗೆದುಕೊಂಡರೆ ಏನಾಗುವುದೋ ಅದಕ್ಕೆ ಗೊತ್ತಿಲ್ಲ. ಅದಕ್ಕೆ ವಿಷ ಕೊಟ್ಟರೆ ಸ್ವಲ್ಪವೂ ಅಂಜದೆ ತೆಗೆದು ಕೊಳ್ಳುವುದು. ಆದರೆ ಅದನ್ನೇ ನಿನಗೆ ಕೊಟ್ಟರೆ ಹಿಂದೆ ಸರಿಯುವೆ. ನಿನಗೆ ಆ ವಿಷದ ಪರಿಣಾಮ ಗೊತ್ತಿದೆ. ಮನಸ್ಸು ಒಂದು ವಿಚಿತ್ರವಸ್ತು. ನೀನು ಯಾವುದನ್ನು ಮುಂದೆ ಹಿಡಿಯುವೆಯೋ ಅದನ್ನು ಅದು ತೆಗೆದುಕೊಳ್ಳು ವುದು.

ನಾನು ನಿಮಗೆ ಮತ್ತೊಂದು ಅತಿಮುಖ್ಯವಾದುದನ್ನು ಹೇಳಬೇಕಾ ಗಿದೆ. ಮೊದಲು ಒಂದು ಆದರ್ಶವನ್ನು ಜೀವನದಲ್ಲಿ ಇಟ್ಟುಕೊಳ್ಳಿ. ನಂತರ ಅವನ್ನು ಸೇರುವುದಕ್ಕೆ ಹೋರಾಡಿ. ದೇವರು ನಮ್ಮ ಆದರ್ಶ. ಎಲ್ಲಾ ಪ್ರಾಣಿಗಳಲ್ಲೂ, ಎಲ್ಲಾ ದೇಶಗಳಲ್ಲೂ, ಎಲ್ಲಾ ಕಾಲದಲ್ಲೂ ಅವನು ವ್ಯಕ್ತವಾಗುತ್ತಿರುವನು. ನಿನ್ನಲ್ಲಿ ನನ್ನಲ್ಲಿ ಹೆಚ್ಚು ಕಡಿಮೆ ಪ್ರಕಾಶಿ ಸುತ್ತಿರುವವನೆ ಅವನು. ವಿಶ್ವವನ್ನೆಲ್ಲಾ ವ್ಯಾಪಿಸಿರುವ ಆತ್ಮನೇ ಅವನು. ಅದಕ್ಕಿಂತ ಅಧಿಕ ಮತ್ತಾವುದೂ ಇಲ್ಲ. ಅವನನ್ನು ಮಾತ್ರ ನಿಮ್ಮ ಜೀವ ನದ ಆದರ್ಶವನ್ನಾಗಿ ಮಾಡಿಕೊಳ್ಳಿ. ಸ್ವಲ್ಪ ಸಮಾಧಾನತಾಳಿ, ಎಂದಿಗೂ ಬತ್ತದ ಆನಂದದ ಚಿಲುಮೆ ಅವನು ಎಂಬುದು ಆಗ ಗೊತ್ತಾಗುವುದು. ಪ್ರಪಂಚ; ಅದನ್ನು ಬೇಕಾದಷ್ಟು ನೀನು ಅನುಭವಿಸಿರುವೆ. ಈಗ ಮತ್ತೊಂದನ್ನು, ದೇವರನ್ನು ಹುಡುಕಿ. ಅಜ್ಞಾನದ ತೆರೆ ನಿನ್ನಮುಂದೆ ಇರುವುದು. ದೇವರ ದರ್ಶನವನ್ನು ತಡೆಯುತ್ತಿರುವುದು. ಅದನ್ನು ಕತ್ತರಿಸಿ. ಹಿಂದೆಯೇ ಅದು ಗೋಚರಿಸುವುದು. ಮಾಯೆಯಿಂದ ಪಾರಾಗುವುದು ಬಹಳ ಕಷ್ಟ. ಆದರೆ ಅಸಾಧ್ಯವಲ್ಲ. ನಿನಗಿಂತ ಮುಂಚೆ ಹಲವರು ಪಾರಾ ಗಿರುವರು. ನೀನೂಕೂಡ ಪಾರಾಗಬಹುದು. ಪ್ರಯತ್ನಪಡು. ಜಯ ಸಮೀಪದಲ್ಲೆ ಇರುವುದು. ಬಾಗಿಲನ್ನು ತಟ್ಟು, ತೆರೆಯುವುದು. ನಿನ್ನ ಕಣ್ಣಿಗೆ ಪ್ರಪಂಚವೇ ಬೇರೆ ರೂಪನ್ನು ತಾಳುವುದು.

ಶಿಷ್ಯ :-ಶಾಸ್ತ್ರವನ್ನು ನಾವು ಹೇಗೆ ನೋಡಬೇಕು, ಅದರಲ್ಲಿ ನಂಬಿಕೆ ಯನ್ನು ಇಡಬೇಕೆ ?

ಸ್ವಾಮಿಜಿ :—ಹೌದು, ನಿಜವಾಗಿಯೂ ಅದನ್ನು ನಂಬಬೇಕು. ಶಾಸ್ತ್ರದಲ್ಲಿ ಹೇಳಿದುದೆಲ್ಲ ಸತ್ಯ. ಮಾನವನ ಹಿತಕ್ಕಾಗಿ ಹಿಂದಿನಿಂದಲೂ ಇದನ್ನು ಮಾಡಿ, ತಲೆ-ತಲಾಂತರಗಳಿಂದಲೂ ಇಲ್ಲಿನವರೆಗೂ ಬಂದಿದೆ. ನೀನು ಅವುಗಳನ್ನು ಪರಿಪಾಲಿಸಬೇಕು.

ಕರ್ಮದ ವಿಷಯವಾಗಿ ಮತ್ತೊಂದು ಸಲಹೆ. ಕರ್ಮವನ್ನು

ಎಂದಿಗೂ ಪೂರ್ಣ ಬಿಡಬೇಡ. ಅದು ಇಲ್ಲದೇಇದ್ದರೆ ನೀನು ಬದುಕು ವುದೇ ಅಸಾಧ್ಯ. ಇದು ಕೂಡ ಕೊನೆಗೆ ನಿನ್ನನ್ನು ಭಗವಂತನ ಸಾಕ್ಷಾತ್ಕಾರಕ್ಕೆ ಒಯ್ಯುವುದು. ಕರ್ಮದ ಆದಿ ಮನುಷ್ಯನಿಗೆ ಗೊತ್ತಿಲ್ಲ. ಆದರೆ ಅದರ ಅಂತ್ಯ ಗೊತ್ತಿದೆ. ಭಗವಂತನ ಸಾಕ್ಷಾತ್ಕಾರವಾದಮೇಲೆ ಕರ್ಮ ಬಂಧನಗಳೆಲ್ಲ ಕಳಚಿಬೀಳುವುವು. ಅಲ್ಲಿಯವರೆವಿಗೂ ನೀನು ಕರ್ಮದ ಎಲ್ಲೆಯೊಳಗೆ ಇರುವೆ. ಕರ್ಮವನ್ನು ಮಾಡಲೇಬೇಕು. ಕರ್ಮಕ್ಕೋಸುಗ ಕರ್ಮಮಾಡುವುದು ಶ್ರೇಯಸ್ಕರ.

ಭಕ್ತ:-ನಾವು ಯಾವ ಆಹಾರವನ್ನು ಸೇವಿಸಬೇಕು ? ಇದರಲ್ಲಿ ಯಾವುದಾದರೂ ವಿಧಿ-ನಿಷೇಧಗಳು ಇವೆಯೆ ?

ಸ್ವಾಮಿಜಿ:-ಇದು ಜಟಿಲಪ್ರಶ್ನೆ. ಇದಕ್ಕೆ ಉತ್ತರ ಕೊಡುವುದು ಬಹಳ ಕಷ್ಟ. ಮನುಷ್ಯರಲ್ಲಿ ಒಬ್ಬರ ದೇಹಪ್ರಕೃತಿಯಂತೆ ಮತ್ತೊಬ್ಬರದು ಇಲ್ಲ. ಆದಕಾರಣ ಆಹಾರದಲ್ಲಿ ಎಲ್ಲರಿಗೂ ಅನ್ವಯಿಸುವುದನ್ನು ಹೇಳು ವುದು ಅಸಾಧ್ಯ. ಒಂದು ನಿನಗೆ ಒಗ್ಗಬಹುದು. ಆವರೆ ನನ್ನ ದೇಹಕ್ಕೆ ಆಗುವುದಿಲ್ಲ. ಆದಕಾರಣವೆ ನಮ್ಮ ಶಾಸ್ತ್ರ ಇದಕ್ಕೆ ಹೆಚ್ಚು ಪ್ರಾಧಾನ್ಯ ಕೊಟ್ಟಿಲ್ಲ. ಗೀತೆಯಲ್ಲಿ ಆಹಾರಕ್ಕೆ ಸಂಬಂಧಪಟ್ಟ ಕೆಲವು ನಿಯಮ ವನ್ನು ನೋಡುತ್ತೇವೆ. ಅದು ಕೇವಲ ಸಾಮಾನ್ಯವಾಗಿಧೆ. ಒಬ್ಬ ಜೀರ್ಣಿಸಿ ಕೊಳ್ಳುವುದಕ್ಕೆ ಕಷ್ಟವಾದುದನ್ನು ತೂರೆಯಬೇಕು. ತನ್ನ ಜೀರ್ಣಶಕ್ತಿಗೆ ತಕ್ಕಂತೆ ಒಬ್ಬ ಆಹಾರವನ್ನು ತೆಗೆದುಕೊಳ್ಳಬೇಕು.

ಶಿಷ್ಯ:-ಸ್ವಾಮಿಜಿ, ಮಾಂಸಾಹಾರದಿಂದ ಪ್ರಾಣಿಹತ್ಯಾದೋಷ ಬರುವುದಿಲ್ಲವೆ ?

ಸ್ವಾಮಿಜಿ:- ಇಲ್ಲ. "ಅಹಿಂಸಾಪರಮೋಧರ್ಮ" ವೆಂದು ಸಾರು ವುದು, ಆದರೆ ಅದು ಯಾವಾಗ? ಭಗವಂತನ ಸಾಕ್ಷಾತ್ಕಾರವಾದಮೇಲೆ, ಆತನೇ ಎಲ್ಲಾ ಪ್ರಾಣಿಗಳಲ್ಲೂ ಇರುವನು ಎಂದು ಗೊತ್ತಾದಮೇಲೆ. ಆಗ ಮಾತ್ರ ನಿಜವಾದ ಅಹಿಂಸೆ ಸಾಧ್ಯ. ಅದಕ್ಕಿಂತ ಮುಂಚೆ ನಾವು ಕೇವಲ ಮಾತಾಳಿಗಳಾಗಬಹುದು ಅಷ್ಟೆ. ಒಂದೇ ಆತ್ಮ ನಿನ್ನಲ್ಲಿ ಮತ್ತು ಇರುವೆಯಲ್ಲಿ ಇದೆ ಎಂದು ಗೊತ್ತಾದಮೇಲೆ ಬರುವುದು. ಅದಕ್ಕಿಂತ ಮುಂಚೆ ಇದು ಸಾಧ್ಯವಿಲ್ಲ. ನೀವು ಬೇಕಾದರೆ ಅಹಿಂಸೆಯ ಮಾತನ್ನು ಆಡಬಹುದು. ಆದರೆ ಹಿಂಸೆಯನ್ನು ತ್ಯಜಿಸಲು ಸಾಧ್ಯವೆ? ನೀನು ಏನನ್ನು ತಿನ್ನುವೆ; ಆಲೂಗೆಡ್ಡೆಯೆ? ಅದನ್ನು ನೆಲದಲ್ಲಿ ಹಾಕಿದರೆ ಮೊಳೆತು ಸಸಿ ಯಾಗುವುದು. ಹೊಸ ಫಲವನ್ನು ಕೊಡುವುದು. ಇದರಲ್ಲಿ ಜೀವವಿಲ್ಲವೆ?

ಛತ್ರವನ್ನು ಬಿತ್ತಿ. ಅದು ಸಸಿಯಾಗುವುದು. ಅದರಲ್ಲಿ ಜೀವವಿಲ್ಲವೆ?

ಒಂದು ತೊಟ್ಟು ನೀರನ್ನು ಸೂಕ್ಷ್ಮದರ್ಶಕ ಯಂತ್ರದಅಡಿ ಇಟ್ಟು ನೋಡಿ. ಅದರಲ್ಲಿ ಕೋಟ್ಯಾಂತರ ಕ್ರಿಮಿಕೀಟಗಳು ಇರುವುದು ಕಾಣುವುದು. ನೀವು ಅದನ್ನು ಕುಡಿಯುತ್ತೀರಿ. ಬದುಕಬೇಕಾದರೆ ಉಸಿರಾಡಬೇಕು. ಪ್ರತಿಯೊಂದುಸಲ ಉಸಿರಾಡುವಾಗಲೂ ಲಕ್ಷಾಂತರಕ್ರಿಮಿಗಳನ್ನು ನೀನು ಕೊಲ್ಲುವೆ. ಶಾಕಾಹಾರವನ್ನೇ ಪ್ರತಿಪಾದಿಸುವವರನ್ನು ತೆಗೆದುಕೊಳ್ಳಿ. ಅವರು ಯಾವ ಆಹಾರ ಹೇಳುತ್ತಾರೆ. ಹಾಲು ತುಪ್ಪ ಅಲ್ಲವೆ? ಹಾಲು ಹೇಗೆ ಸಿಕ್ಕುವುದು? ಕರು ಪಾಲಿನ ಹಾಲಿಗೆ ಸೊನ್ನೆ ಸುತ್ತಿ, ತೆಗೆದುಕೊಳ್ಳುವಿರಿ. ಇದೊಂದು ಮಹಾಪಾಪ. ಆದರೆ ಸಾಧಾರಣ ಜನರಿಗೆ ಇದು ಪಾಪವಲ್ಲ. ಪಾಪವೆಲ್ಲ ಒಂದು ಚೂರು ಮೀನು, ಮಾಂಸದಮೇಲೆ ನಿಂತಿರುವುದು. ಇಂತಹ ಪೊಳ್ಳುತರ್ಕದಿಂದ ಪ್ರಯೋಜನವಿಲ್ಲ. ಹಿಂದಿನಕಾಲದ ಹಿಂದೂಗಳಲ್ಲಿ ಈ ಭಾವನೆಯೇ ಇರಲಿಲ್ಲ. ನಂತರ ಬಂದ ವೈಷ್ಣವರು ಇದನ್ನು ಜಾರಿಗೆ ತಂದರು.

## ೨೨
## ಸಮಾಧಿ

ಸ್ವಾಮಿಜಿ: ಸಮಾಧಿಯಲ್ಲಿ ಎರಡುವಿಧ. ಸವಿಕಲ್ಪ ಮತ್ತು ನಿರ್ವಿಕಲ್ಪ. ನಿರ್ವಿಕಲ್ಪ ಸಮಾಧಿಯಲ್ಲಿ ನಾಮರೂಪಗಳಾವುವೂ ಇರುವುದಿಲ್ಲ. ಪ್ರಪಂಚವೆಲ್ಲ ಮಾಯವಾಗುವುದು. ಕಾಶೀಪುರದ ಉದ್ಯಾನದಲ್ಲಿ ಸ್ವಾಮಿ ವಿವೇಕಾನಂದರಿಗೆ ಇದು ಪ್ರಾಪ್ತವಾಗಿತ್ತು. ಆದರೆ ಎಲ್ಲೋ ಕೆಲವರಿಗೆ ಮಾತ್ರ ಇದು ಗೊತ್ತಿತ್ತು. ಅವರು ಇತರರಿಗೆ ತಮ್ಮ ಅನುಭವವನ್ನು ಬಹಳ ಅಪರೂಪ ಹೇಳುತ್ತಿದ್ದುದು. ಆನಂದಸಮಾಧಿ ಎಂಬ ಮತ್ತೊಂದು ಸಮಾಧಿ ಇದೆ. ಈ ಸ್ಥಿತಿಯಲ್ಲಿ ಮನಸ್ಸು ಅಪರಿಮಿತ ಆನಂದವನ್ನು ಅನುಭವಿಸುವುದು. ದೇಹಕ್ಕೆ ಇದನ್ನು ಸಹಿಸುವ ಶಕ್ತಿ ಇರುವುದಿಲ್ಲ. ಬ್ರಹ್ಮರಂಧ್ರ ತೆರೆಯುವುದು. ಈ ಮಹಾನಂದದ ಸ್ಥಿತಿಯಲ್ಲಿ ದೇಹ ಹೆಚ್ಚು ಎಂದರೆ ಮೂರು ವಾರಗಳುಮಾತ್ರ ನಿಲ್ಲುವುದು.

ಮನುಷ್ಯರು ದೇವರನ್ನು ಸಾತ್ತ್ವಿಕ, ರಾಜಸಿಕ, ತಾಮಸಿಕ ಗುಣಕ್ಕೆ ಅನುಸಾರವಾಗಿ ಭಾವಿಸುವರು. ಇಂತಹ ಅನರ್ಘ್ಯವಸ್ತುಗಳೊಂದಿಗೆ ವ್ಯವಹಾರ ನಡೆಸುವ ಬದಲು ಮನುಷ್ಯ ಕೆಲಸಕ್ಕೆ ಬಾರದ ಪ್ರಾಪಂಚಿಕ ವಸ್ತುಗಳನ್ನೇ ಆಶಿಸುವನಲ್ಲ! ಎಷ್ಟು ವ್ಯಸನಕರ. ಯಾವಾಗಲೂ ದೇವರ ಮನನ ಮತ್ತು ಧ್ಯಾನವನ್ನು ಅಭ್ಯಾಸಮಾಡಬೇಕು. ಪ್ರಪಂಚದಲ್ಲಿ ನಮ್ಮ

ವರು ಎಂದರೆ ದೇವರೊಬ್ಬನೇ ಇರುವುದು. ಈ ಜೀವನದಲ್ಲಿ ಆ ಸತ್ಯವನ್ನು ತಿಳಿಯಬೇಕಾಗಿದೆ.

ಸಾಧಾರಣ ಮನುಷ್ಯನ ಮನಸ್ಸು ಸ್ವಾಭಾವಿಕವಾಗಿ ಪ್ರಪಂಚದ ಕಡೆಗೆ ಇದೆ. ಇದನ್ನು ಬದಲಾಯಿಸಿ ದೇವರಕಡೆಗೆ ತಿರುಗಿಸಬೇಕಾಗಿದೆ. ಶ್ರೀರಾಮಕೃಷ್ಣರ ಮನಸ್ಸು ಯಾವಾಗಲೂ ಸಚ್ಚಿದಾನಂದದ ಕಡೆಗೆ ಇರುತ್ತಿತ್ತು. ಪಂಚವಟಿಯಲ್ಲಿ ಸಾಧನೆಮಾಡುತ್ತಿದ್ದಾಗಲಂತೂ ಮನಸ್ಸು ಮೇಲಿನ ಅವಸ್ಥೆಯಲ್ಲಿತ್ತು. ಕಾಲದ ಅರಿವೇ ಆಗ ಅವರಿಗೆ ಆಗುತ್ತಿರಲಿಲ್ಲ. ನೀರು ಆಹಾರದಮೇಲೆ ಗಮನವೇ ಅವರಿಗೆ ಇರುತ್ತಿರಲಿಲ್ಲ. ಇವರ ದೇಹ ವನ್ನು ಜಗತ್ತಿನ ಹಿತಕ್ಕಾಗಿ ಸಂರಕ್ಷಿಸಬೇಕಾಗಿದ್ದುದರಿಂದ ಇವರ ಮನಸ್ಸು ಯಾವಾಗಲೂ ಇರುತ್ತಿದ್ದ ಸಮಾಧಿ ಅವಸ್ಥೆಯಿಂದ ಸ್ವಲ್ಪ ಕೆಳಗೆ ಬಂದಾಗ ಇವರ ಹತ್ತಿರ ಇದ್ದವರು ಬಾಯಿಗೆ ಸ್ವಲ್ಪ ಆಹಾರವನ್ನು ಬಲವಂತದಿಂದ ತುರುಕುತ್ತಿದ್ದರು. ಹೀಗೆ ದಿನಕ್ಕೆಲ್ಲಾ ಏಳೆಂಟು ತುತ್ತಿನಷ್ಟು ಅನ್ನವನ್ನು ಅವರು ತಿನ್ನುವಂತೆ ಮಾಡುತ್ತಿದ್ದರು. ನಂತರ ನಾವು ಅವರನ್ನು ಕಂಡಾ ಗಲೂಕೂಡ ಅವರು ತಮ್ಮ ಮನಸ್ಸನ್ನು ಕೆಳಗೆ ಇಳಿಸಬೇಕಾದರೆ ಬಹಳ ಪ್ರಯತ್ನಪಡುತ್ತಿದ್ದರು.

ಒಂದುದಿನ ಶ್ರೀರಾಮಕೃಷ್ಣರು ಶಬ್ದಬ್ರಹ್ಮನಮೇಲೆ ಮಾತಾಡಿದರು. ನಾನು ಪಂಚವಟಿಯಲ್ಲಿ ಮಧ್ಯಾಹ್ನ ಇದರಮೇಲೆ ಧ್ಯಾನಮಾಡುತ್ತಿದ್ದೆ. ಓ! ತಕ್ಷಣ ಅವರ ಮಾತಿನ ಸತ್ಯ ಗೊತ್ತಾಯಿತು. ಸುತ್ತಲೂ ಇರುವ ಮರದಮೇಲಿನ ಹಕ್ಕಿಗಳು ಪವಿತ್ರ ವೇದಮಂತ್ರೋಚ್ಚಾರಣೆಮಾಡು ತ್ತಿದ್ದುವು.

ಒಂದುಸಲ ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ಒಂದುದಿನ ನಾನು ಕಾಳಿಕಾದೇವಾಲಯದಲ್ಲಿ ಧ್ಯಾನಮಾಡುತ್ತಿದ್ದಾಗ ಮಾಯಾತೆರೆ ಒಂದಾದಮೇಲೊಂದು ನನ್ನ ಮುಂದೆ ಮಾಯವಾಗುವುದನ್ನು ಕಂಡೆ. ಮತ್ತೊಂದುದಿನ ಜಗನ್ಮಾತೆ ಕೋಟಿಸೂರ್ಯಪ್ರಕಾಶಮಾನವಾದ ಜ್ಯೋತಿಃ ಪುಂಜವನ್ನು ಹಿಡಿದಳು. ಅದರಿಂದ ಒಂದು ಚಿನ್ಮಯಮೂರ್ತಿ ಕ್ರಮೇಣ ವ್ಯಕ್ತವಾಗಿ ಮರುಕ್ಷಣವೇ ಆ ಬೆಳಕಿನಲ್ಲೇ ಐಕ್ಯವಾಗಿ ಹೋಯಿತು." ನಿರಾಕಾರ ಆಕಾರವನ್ನು ತಾಳಿ ಪುನಃ ನಿರಾಕಾರದಲ್ಲಿ ಐಕ್ಯವಾಯಿತು.

ಒಂದುದಿನ ಕಾ—ಕಾಳಿಕಾದೇವಾಲಯವನ್ನು ಪ್ರವೇಶಿಸಿ ಜಗ ನ್ಮಾತೆಯ ಮೇಲೆ ರೇಗಾಡಿದನು. ಅವನ ಎದೆ ಕೆಂಪಾಯಿತು. ಕೋಪ ದಿಂದ ಕಣ್ಣೀರು ಸುರಿಯುತ್ತಿತ್ತು. ಇದುವರೆವಿಗೂ ಗರ್ಭಗುಡಿಯೊಳಗೆ

ಇದ್ದ ಶ್ರೀರಾಮಕೃಷ್ಣರು ಇವನ ಧ್ವನಿಯನ್ನು ಕೇಳಿ ಹೊರಗೆ ಬಂದು, "ನಿಜ ನಮ್ಮ ಹತ್ತಿರದವರಮೇಲೆ ಕೋಪವನ್ನು ತೋರಬಹುದು. ನಿನ್ನದು ವೀರಭಾವ. ನನ್ನದು ಮಾತೃಭಾವ" ಎಂದರು.

ಮಾನವದೇಹವೆ ಭಗವಂತನ ಅತ್ಯುತ್ತಮ ದೇವಾಲಯ. ಆದಕಾರಣವೆ ಶಾಸ್ತ್ರ ಈ ದೇಹದಲ್ಲಿ ಧ್ಯಾನ, ಪೂಜೆಮಾಡಬೇಕೆಂದು ವಿಧಿಸುವುದು. ಈ ದೇಹದಲ್ಲಿ ಸಹಸ್ರಾರವಿದೆ. ಒಮ್ಮೆ ಮನಸ್ಸು ಅಲ್ಲಿಗೆ ಹೋದರೆ ಸುಲಭವಾಗಿ ಬರುವುದಿಲ್ಲ. ಆದಕಾರಣವೆ ಶಾಸ್ತ್ರ "ರಥದಲ್ಲಿ ಯಾವಾಗ ವಾಮನನನ್ನು ನೋಡುತ್ತೇವೆಯೊ ಆಗ ಪುನರ್ಜನ್ಮವಿಲ್ಲ" ವೆನ್ನುವುದು. ಅಂದರೆ ಈ ದೇಹವೆ ರಥ. ಇಲ್ಲಿ ದೇವರನ್ನು ಕಂಡಾದಮೇಲೆ ಪುನರ್ಜನ್ಮವಿಲ್ಲ. ಈ ದೇಹದಲ್ಲೆ ರಾಮಪ್ರಸಾದ ಎಲ್ಲರ ತಾಯಿತಂದೆಯಾದ ಈಶ್ವರನನ್ನು ಕಂಡನು. ಆಗ "ಜಗನ್ಮಾತೆ, ನೀನು ಈ ದೇಹದಲ್ಲಿರುವೆ. ನಾನು ನಿನ್ನನ್ನು ನೋಡುತ್ತೇನೆ" ಎಂದು ಹಾಡಿದ.

ಈ ದೇಹದಲ್ಲೆ ಮೂರನೆ ಕಣ್ಣು ಇದೆ. ಅದು ಜ್ಞಾನದ ಕಣ್ಣು. ಅದು ಹುಬ್ಬಿನ ನಡುವೆ ಇದೆ. ಇದು ತೆರೆದರೆ ಎಲ್ಲಾ ಆನಂದಮಯವಾಗಿ ಕಾಣುವುದೆಂದು ಶ್ರೀರಾಮಕೃಷ್ಣರು ಹೇಳುವರು. ಯಾವುದು ಸಮಷ್ಟಿಯಲ್ಲಿ ಸತ್ಯವೊ ಅದು ವ್ಯಷ್ಟಿಯಲ್ಲಿಯೂ ಸತ್ಯ.

ದೇವರು ನಮ್ಮ ಸಮೀಪದಲ್ಲೆ ಇರುವನು. ಇದು ಎಷ್ಟು ವಿಚಿತ್ರ! ಒಮ್ಮೆ ಅವನ ದರ್ಶನ ಪಡೆದು ಆನಂದದ ರುಚಿ ನೋಡಿದರೆ ಉಳಿದಾವುದಕ್ಕೂ ಅವನಿಗೆ ಆಸೆಯೇ ಇರುವುದಿಲ್ಲ. ಬಾಹ್ಯಪೂಜೆಯಲ್ಲಿ ಉಪಯೋಗಿಸುವ ದೇವಸ್ಥಾನ, ರಥೋತ್ಸವ ಮುಂತಾದುವೆಲ್ಲ ಭಗವಂತನ ಅತ್ಯುತ್ತಮ ದೇವಾಲಯವಾದ ಮಾನವ ದೇಹದ ಚಿಹ್ನೆಗಳು.

೨೩

## ಮಾನಸಿಕ ಶಕ್ತಿ

ಸ್ವಾಮಿಜಿ: ರಾಜ ಏಳುಕೋಟೆ ಒಳಗೆ ಇರುವ ತನ್ನ ಅರಮನೆಯಲ್ಲಿರುವನು. ಒಬ್ಬ ಬಡವ ರಾಜನನ್ನು ನೋಡಬೇಕೆಂದು ಅಪೇಕ್ಷಿಸುತ್ತಾನೆ. ಅವನ ಪ್ರಾರ್ಥನೆ ಈಡೇರುತ್ತದೆ. ಮಂತ್ರಿ ರಾಜದ್ವಾರದ ಮೂಲಕ ಅವನನ್ನು ಕರೆದುಕೊಂಡು ಹೋಗುವನು. ಪ್ರತಿದ್ವಾರದ ಸಮೀಪದಲ್ಲೂ ಚೆನ್ನಾದ ಪೋಷಾಕನ್ನು ಹಾಕಿಕೊಂಡಿರುವ ಅಧಿಕಾರಿಯನ್ನು ನೋಡಿ "ಇವನೆ ರಾಜ?" ಎಂದು ಮಂತ್ರಿಯನ್ನು ಕೇಳುತ್ತಾನೆ. ಪ್ರತಿಸಲವೂ "ಇಲ್ಲ" ವೆಂದು ಉತ್ತರ ಬರುವುದು. ಸಪ್ತಮದ್ವಾರವನ್ನು

ಸಮೀಪಿಸಿದಾಗ ಅಲ್ಲಿರುವ ರಾಜನ ಸೌಂದರ್ಯ ಮತ್ತು ಗಾಂಭೀರ್ಯವನ್ನು ನೋಡಿ ಅವನೇ ದೊರೆ ಎಂದು ಇವನಿಗೆ ಗೊತ್ತಾಗಿ ಮಂತ್ರಿಯನ್ನು ಕೇಳುವುದೇ ಇಲ್ಲ. ಗುರುವೂ ಇದರಂತೆಯೆ. ಮಂತ್ರಿಯಂತೆ ಶಿಷ್ಯನನ್ನು ಗುರು ಮೆಟ್ಟಿಲು ಮೆಟ್ಟಿಲಾಗಿ ಭಗವಂತನೆಡೆಗೆ ಕರೆದುಕೊಂಡು ಹೋಗುವನು.

ನಿನ್ನ ಮನಸ್ಸಿಗಿಂತ ಯಾವ ಗುರುವೂ ಅಧಿಕನಲ್ಲ. ಧ್ಯಾನದಿಂದ ನಿನ್ನ ಮನಸ್ಸು ಸ್ಥಿರವಾದಮೇಲೆ ಯಾವುದನ್ನು ಮಾಡಬೇಕು, ಯಾವ ದಾರಿಯನ್ನು ಅನುಸರಿಸಬೇಕು, ಎಂಬುದನ್ನು ನಿನ್ನ ಮನಸ್ಸೇ ಹೇಳುವುದು. ನಿನ್ನ ದಿನಚರ್ಯೆಯಲ್ಲಿ ಕೂಡ ಯಾವುದನ್ನು ಮೊದಲುಮಾಡಬೇಕು, ಯಾವುದನ್ನು ನಂತರ ಮಾಡಬೇಕು ಎನ್ನುವುದನ್ನು ಹೇಳುವುದು. ಗುರಿ ಸೇರುವವರೆಗೆ ಅದು ನಿನಗೆ ದಾರಿತೋರುವುದು.

ನಿನ್ನ ಮನಸ್ಸನ್ನು ಎರಡು ಮಾರ್ಗದಲ್ಲಿ ಸ್ಥಿರಗೊಳಿಸಬಹುದು. ನಿರ್ಜನ ಪ್ರದೇಶಕ್ಕೆ ಹೋಗಿ ಏಕಾಗ್ರತೆ ಮತ್ತು ಧ್ಯಾನದಿಂದ ಮನಸ್ಸು ಯಾವ ಬಾಹ್ಯ ಆಕರ್ಷಣೆಗೂ ಒಳಗಾಗದಂತೆ ಮಾಡಬಹುದು. ಅಥವಾ ಯಾವಾಗಲೂ ಒಳ್ಳೆಯ ಆಲೋಚನೆಯನ್ನು ಮಾಡುತ್ತ ಭಗವಂತನಮೇಲೆ ಆಸಕ್ತಿ ಮತ್ತು ಭಕ್ತಿಯನ್ನು ಪಡೆದು ಮನಸ್ಸನ್ನು ಸ್ಥಿರಗೊಳಿಸಬಹುದು. ಮನಸ್ಸು ಹಾಲು ಕೊಡುವ ಹಸುವಿನಂತೆ. ಚೆನ್ನಾಗಿ ಮೇವು ಹಾಕಿದರೆ ಹೆಚ್ಚು ಹಾಲುಕೊಡುವುದು. ಹಸುವಿಗೆ ಒಳ್ಳೆಯ ಆಹಾರ ಕೊಟ್ಟರೆ ನಿಮಗೆ ಅದು ಒಳ್ಳೆಯ ಪ್ರತಿಫಲವನ್ನು ಕೊಡುವುದು. ಮನಸ್ಸಿಗೆ ಆಹಾರ ಯಾವುದು? ಧ್ಯಾನ, ಏಕಾಗ್ರತೆ, ಪ್ರಾರ್ಥನೆ, ಪೂಜೆ ಇವೆ.

ಕೆಲವು ಸಾಧಕರು ಇರುವರು. ಮನಸ್ಸನ್ನು ಸಡಿಲಬಿಟ್ಟು ಅದು ಎಲ್ಲಿಗೆ ಹೋಗುವುದು ಎಂಬುದನ್ನು ಗಮನಿಸುತ್ತಾ ಇರುವರು. ಮನಸ್ಸು ಅಲ್ಲಿ ಇಲ್ಲಿ ಅಲೆದಾಡಿ, ಎಲ್ಲೂ ಶಾಂತಿ ಸಿಕ್ಕದೆ ಪುನಃ ದೇವರ ಸಮೀಪಕ್ಕೆ ಬರುವುದು. ನೀನು ಮನಸ್ಸನ್ನು ನೋಡಿಕೊಂಡರೆ ಮನಸ್ಸು ನಿನ್ನನ್ನು ನೋಡಿಕೊಳ್ಳುವುದು. ಹೀಗೆ ಇರುವಾಗ ಮನಸ್ಸನ್ನು ಅತಿಜಾಗ್ರತೆಯಿಂದ ಕಾಯಬೇಕು. ಬಹಳ ಜೋಪಾನವಾಗಿ ಅದನ್ನು ಪರೀಕ್ಷಿಸಬೇಕು. ಇದು ನಮ್ಮ ಕರ್ತವ್ಯ. ಇಂತಹ ಮಾನಸಿಕ ವಿಭಜನೆ ಮಾಡಬೇಕಾದರೆ ನಿರ್ಜನಸ್ಥಳದಷ್ಟು ಮತ್ತಾವುದೂ ಅನುಕೂಲವಿಲ್ಲ. ಆದ ಕಾರಣವೆ ಹಿಂದಿನಕಾಲದ ಋಷಿಗಳು ಹಿಮಾಲಯ ಮತ್ತು ಗಂಗಾತೀರ ಮುಂತಾದುವನ್ನು ತಮ್ಮ ತಪಸ್ಸಿಗೆ ಆರಿಸಿಕೊಳ್ಳುತ್ತಿದ್ದರು. ಮನಸ್ಸಿನಲ್ಲಿ

ರುವ ಆಸಕ್ತಿಯನ್ನೆಲ್ಲಾ ಕಳೆಯಬೇಕು. ಅದು ನಿರ್ಮಲವಾಗಬೇಕು. ಆಗಮಾತ್ರ ಭಗವಂತನ ಪ್ರತಿಬಿಂಬವನ್ನು ಅಲ್ಲಿ ನೋಡಬಹುದು. ಮನಸ್ಸು ಆಸಕ್ತವಾಗಿರುವ ಪ್ರಾಪಂಚಿಕವಿಷಯಗಳನ್ನೆಲ್ಲಾ ತ್ಯಜಿಸುವುದೇ ನಿಜವಾದ ತ್ಯಾಗ. ಒಮ್ಮೆ ಮನಸ್ಸು ಈ ಬಂಧನದಿಂದ ಪಾರಾದರೆ ಪುನಃ ಅದು ಎಷ್ಟೇ ಪ್ರಲೋಭನಗಳ ಮಧ್ಯದಲ್ಲಿ ಇದ್ದರೂ ಅದರ ಆಕರ್ಷಣೆಗೆ ಬೀಳುವುದಿಲ್ಲ. ಆದಕಾರಣವೇ ಸಾಧನೆಯ ಆವಶ್ಯಕತೆ. ಹೋರಾಟವಿಲ್ಲದ ಜೀವನದಲ್ಲಿ ಚೈತನ್ಯವಿಲ್ಲ. ಆದರೆ ಯಾರು ಧೈರ್ಯದಿಂದ ಯಾವ ಆತಂಕವನ್ನಾದರೂ ಎದುರಿಸುವರೋ ಅವರಿಗೆ ಮಾತ್ರ ಶಾಶ್ವತ ಶಾಂತಿ ಸಿಕ್ಕುವುದು.

ಧ್ಯಾನಕ್ಕೆ ಬಹಳ ಅನುಕೂಲವಾದ ಸಮಯವೆ ಸಂಗಮ; ಅಂದರೆ ದಿನಕಳೆದು ರಾತ್ರಿ ಆರಂಭವಾಗುವಾಗ, ರಾತ್ರಿ ಕಳೆದು ದಿನ ಆರಂಭವಾಗುವಾಗ. ಈ ಸಮಯದಲ್ಲಿ ಪ್ರಕೃತಿ ಶಾಂತವಾಗಿ ಸ್ತಬ್ಧವಾಗಿರುವುದು. ಮಾನವನ ಆಧ್ಯಾತ್ಮಿಕ ಸಾಧನೆಗೆ ಬೆಳಿಗ್ಗೆ ಹೊತ್ತಿಗೆ ಮುಂಚೆ ಏಳುವುದು ಒಂದು ಮುಖ್ಯ ಅಂಗವಾಗಿದೆ. ಈ ಸಮಯದಲ್ಲಿ ಸುಷುಮ್ನನಾಡಿ ಕೆಲಸಮಾಡುವುದು. ಎರಡು ಮೂಗಿನ ಹೊಳ್ಳೆಗಳಮೂಲಕ ಉಸಿರಾಡುವುದು. ಸಾಧಾರಣವಾಗಿ ಅದು ಯಾವುದಾದರೂ ಒಂದುಕಡೆ ಮಾತ್ರ ಆಡುತ್ತಿರುವುದು. ಇದರಿಂದ ಮನಸ್ಸು ಚಂಚಲವಾಗುವುದು. ಕೆಲವು ಯೋಗಿಗಳು ಯಾವಾಗ ಸುಷುಮ್ನನಾಡಿ ಕೆಲಸಮಾಡುವುದು ಎಂಬುದನ್ನು ಗಮನಿಸುತ್ತ ಇದ್ದು, ಅದು ಜಾಗ್ರತವಾದೊಡನೆಯೆ ಉಳಿದ ಕೆಲಸವನ್ನೆಲ್ಲ ಬದಿಗಿಟ್ಟು ಧ್ಯಾನಕ್ಕೆ ಕೂಡುವರು.

ಮನುಷ್ಯನಿಗೆ ಶಾಂತಿ ಬೇಕಾಗಿದೆ. ದೇವರೊಂದಿಗೆ ನಿಕಟಸಂಬಂಧವನ್ನು ಸ್ಥಾಪಿಸಿ, ದೇವರನ್ನು ತನ್ನ ಸ್ವಂತವೆಂದು ಭಾವಿಸಬೇಕು. ಮನೋಪ್ರಪಂಚದಲ್ಲಿ ಅವನೊಂದಿಗೆ ವ್ಯವಹಾರವನ್ನು ಇಟ್ಟುಕೊಳ್ಳಬೇಕು. ತನ್ನ ಹತ್ತಿರ ಸ್ನೇಹಿತರು ಬಂಧುಬಳಗದವರೊಂದಿಗೆ ಹೇಗೆ ವರ್ತಿಸುವನೊ ಹಾಗೆ ದೇವರಿಗೆ ನೈವೇದ್ಯ ಕೊಡಬೇಕು, ಬಟ್ಟೆಕೊಡಬೇಕು. ಮೃದುಮಧುರವಾಗಿ ಮಾತನಾಡಬೇಕು. ಇಂತಹ ಮನಸ್ಸಿನ ಒಂದು ಸ್ವಭಾವವನ್ನು ಪಡೆಯಬೇಕಾದರೆ ಯಾವಾಗಲೂ ಅವನನ್ನು ಚಿಂತಿಸುತ್ತಿರುವುದೇ ಸುಲಭಮಾರ್ಗ. ಇದು ಎಲ್ಲಾ ಸಾಧನೆಗಿಂತ ಸುಲಭ. ಭಗವಂತನ ವ್ಯಾಪಾರ ನಮಗೆ ಅಗೋಚರ. ಅವನು ಅನಂತ ಮತ್ತು ಸಾಂತ. ಅವನು ಮನುಷ್ಯನಂತೆ ರೂಪನ್ನು ಧಾರಣೆಮಾಡುವನು. ಅವನನ್ನು ಯಾರು

ತಿಳಿದುಕೊಳ್ಳಬಲ್ಲರು? ಮೊದಲು ಭೂಷುಂಡಿ ಎಂಬ ಕಾಗೆ ರಾಮಚಂದ್ರ ನನ್ನು ಸಾಧಾರಣಮನುಷ್ಯನೆಂದು ತಿಳಿದು ಅಗೋಚರವಾದ ರಾಮನ ಬಾಹುಗಳಿಂದ ಪಾರಾಗಲು ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಎಲ್ಲಿಯೂ ರಕ್ಷೆಸಿಕ್ಕದೆ ಕೊನೆಗೆ ರಾಮನಲ್ಲಿ ಶರಣಾಗಿ ಅವನನ್ನು ಪ್ರಾರ್ಥಿಸಿತು. ದೇವರು ಮಾನವನನ್ನು ಅವನೆಡೆಗೆ ಎಷ್ಟೊ ಮಾರ್ಗಗಳ ಮೂಲಕ ಕರೆದೊಯ್ಯು ವನು! ಯಾವ ದಾರಿಯಮೂಲಕ ತಾನು ಹೋಗಬೇಕಾಗುವುದೊ ಅದು ಯಾರಿಗೂ ಗೊತ್ತಾಗುವುದಿಲ್ಲ. ಕೆಲವುವೇಳೆ ಮುಳ್ಳಿನ ಹಾದಿಯಲ್ಲಿ, ಕೆಲವುವೇಳೆ ಪುಷ್ಪದಂತೆ ಮೃದುವಾದ ಹಾದಿಯಲ್ಲಿ ನಡೆಸುವನು. ಭಗವಂತನಡಿದಾವರೆಯಲ್ಲಿ ಶರಣುಪಡೆಯುವುದೊಂದೇ ಮಾನವನಿಗೆ ಸಾಸ್ಯ. ಇದೊಂದೇ ಪಾರಾಗಲು ಅವನಿಗೆ ಮಾರ್ಗ.

ಹೀನ ಮಾಯಾ ಪ್ರಭಾವಕ್ಕೆ ಸಿಕ್ಕಿ ದೇಹ, ಮನಸ್ಸು, ಇಂದ್ರಿಯ ಗಳೆಲ್ಲ ನಮ್ಮನ್ನು ಅಧೋಗತಿಗೆ ಒಯ್ಯುವುವು. “ಪಂಚಭೂತಗಳ ಬಲೆ ಯಲ್ಲಿ ಸಿಕ್ಕಿ ಬ್ರಹ್ಮನೇ ವ್ಯಥೆಪಡುವನು” ಎನ್ನುವರು ಶ್ರೀರಾಮಕೃಷ್ಣರು. ಇದೇ ಮಾಯೆ! ಆದರೆ ಯಾರು ಮೊದಲು ದೇವರನ್ನು ಕಂಡಿರುವರೋ, ಮಾಯೆಯ ಭ್ರಾಂತಿಕಾರಕ ಆಕರ್ಷಣದಿಂದ ಯಾರು ಪಾರಾಗಿರುವರೊ, ಅಂತಹವರಿಗೆ ಸಾವಿರಪ್ರಪಂಚವೂ ಯಾವ ಕೇಡನ್ನೂ ಮಾಡಲಾರದು. ಮಾಯಾಮೇರೆಯನ್ನು ಆತ ಅತಿಕ್ರಮಿಸಿರುವನು. ಅವಳ ಅದ್ಭುತಗಳು ಅಂತಹವನಿಗೆ ಮಾತ್ರ ವ್ಯಕ್ತ.

ಮಹಾಮಾಯೆಗೆ ಭ್ರಾಂತನಾಗಿ ಮಾನವ, ಪ್ರಪಂಚದಲ್ಲಿ ಹುಟ್ಟಿ ಬಾಳುವುದು ಎಷ್ಟು ದುಃಖ, ತೊಂದರೆ ಎಂಬುದನ್ನು ಅರಿಯಲಾರ. ಪ್ರತಿದಿನವೂ ದೇಹ ನಶಿಸುತ್ತಿರುವುದು; ಆದರೂ ಮಾನವಜನ್ಮವನ್ನು ಏತಕ್ಕೆ ಧಾರಣೆಮಾಡಿರುವೆ ಎಂಬ ಪವಿತ್ರ ಉದ್ದೇಶವನ್ನು ಮರೆಯುವನು. ಮಾನವಜನ್ಮದಲ್ಲಿ ಬೇಕಾದಷ್ಟು ದುಃಖ ಕೋಟಲೆಗಳಿದ್ದರೂ ಇಲ್ಲಿ ಅನು ಕೂಲವಿರುವುದು. ಈ ಜನ್ಮದಲ್ಲಿ ಮಾತ್ರ ಮಾನವ ದೇವರನ್ನು ತಿಳಿಯಲು ಸಾಧ್ಯ. ಈ ದೇಹದ ಸುಖಭೋಗಗಳಿಗೆ ಗಮನಕೊಡದೆ ಜನನಮರಣ ಗಳಿಂದ ಪಾರುಮಾಡುವಂತಹ ಪವಿತ್ರಕಾರ್ಯವನ್ನು ಮಾಡಬೇಕು. ಮನಸ್ಸಿನ ಶಾಂತಿಗೆ ಮೊದಲು ದೊಡ್ಡ ಅಶಾಂತಿಯನ್ನು ಎಬ್ಬಿಸಬೇಕು. ಇದೇ ಮಹಾತ್ಮರ ಬೋಧನೆ.

೨೪

## ದೇವರ ಪೂಜೆ

ಸ್ವಾಮಿಜಿ: ಯಾತ್ರೆ ಹಲವು ವಿಧದಲ್ಲಿ ನಮಗೆ ಸಹಕಾರಿ. ಮುಖ್ಯ ವಾದುದೆ, ಮಹಾಪುರುಷರನ್ನು ಕಂಡು ಅವರನ್ನು ಸೇವಿಸುವ ಭಾಗ್ಯ ಬರುವುದು. ಮತ್ತೊಂದೆ, ಪ್ರಾಪಂಚಿಕ ಆಲೋಚನೆ ಕಡಿಮೆಯಾಗಿ ಭಗವಂತನ ಆಲೋಚನೆ ಹೆಚ್ಚುವುದು. ಇವು ನಮ್ಮ ಸಾಧನೆಗೆ ಸಹಾಯಮಾಡುವುದರಲ್ಲಿ ಸಂದೇಹವಿಲ್ಲ. ಇದರಿಂದ ನಮಗೆ ಆಧ್ಯಾತ್ಮಿಕ ಜ್ಞಾನವೂ ದೊರಕುವುದು.

ಕಾಶಿ ಅತಿಪವಿತ್ರ ಸ್ಥಳ. ಹಲವು ಸಾಧುಗಳು ಅಲ್ಲಿ ವಾಸಿಸುವರು. ಅವರ ಪವಿತ್ರಸಂಗದ ಅವಕಾಶ ನಮಗೆ ದೊರಕುವುದು. ಒಂದು ಆಧ್ಯಾತ್ಮಿಕ ತರಂಗ ಯಾವಾಗಲೂ ಕಾಶಿಯಲ್ಲಿ ಹರಿಯುತ್ತಿರುವುದು. ಭಗವಂತನನ್ನು ಪೂಜಿಸುವುದಕ್ಕೆ ಗೃಹಸ್ಥರಿಗೆ ಇಲ್ಲಿ ಎಷ್ಟೋ ಅವಕಾಶವಿದೆ. ನೀವು ಅಲ್ಲಿ ಸ್ವಲ್ಪ ದಿನವಿದ್ದರೆ ಒಳ್ಳೆಯದು.

ಬೃಂದಾವನ ಮತ್ತೊಂದು ಪವಿತ್ರಸ್ಥಳ. ಹಗಲು ರಾತ್ರಿ ದೇವರನ್ನು ಚಿಂತಿಸುತ್ತಿರುವ ಹಲವು ಸಾಧುಗಳು ಅಲ್ಲಿರುವರು. ನೀವು ಆ ಸ್ಥಳವನ್ನು ಹೋಗಿ ನೋಡಬೇಕು. ಕೆಲಸ ಯಾವಾಗಲೂ ಇದ್ದೇ ಇರುವುದು. ಆದರೂ ಇಂತಹ ಸ್ಥಳಗಳನ್ನು ಒಂದುಸರಿಯಾದರೂ ನೋಡುವುದಕ್ಕೆ ಅವಕಾಶವನ್ನು ಕಲ್ಪಿಸಿಕೊ. ಕೆಲಸದಲ್ಲಿ, ಕೆಲವು ನಮ್ಮನ್ನು ದೇವರಕಡೆಗೆ ಒಯ್ಯುವುವು. ನಿಷ್ಕಾಮಕರ್ಮ ಇದಕ್ಕೆ ಸೇರಿದೆ. ಸಕಾಮಕರ್ಮ ನಿಮ್ಮ ಆಧ್ಯಾತ್ಮಿಕ ಜೀವನಕ್ಕೆ ಸಹಾಯಮಾಡಲಾರದು. ನಿನ್ನ ಹೆಂಡತಿ ಮಕ್ಕಳು ಮತ್ತು ನನ್ನದೆಂದು ಈಗ ಕರೆಯುವುದೆಲ್ಲ ದೇವರಿಗೆ ಸೇರಿದುದೆಂದು ತಿಳಿ. ಇಂತಹ ದೃಢ ನಂಬಿಕೆ ಇದ್ದರೆ ಎಲ್ಲಾ ಸರಿಬರುವುದು. ಬೇರೆ ನಂಬಿಕೆ ಇದ್ದರೆ ಬೇರೆ ಪ್ರತಿಫಲವೇ ದೊರಕುವುದು.

ಭಗವಂತನ ನಾಮೋಚ್ಚಾರಣೆ ಒಳ್ಳೆಯದು. ಮನಸ್ಸು ಇದರಿಂದ ಪರಿಶುದ್ಧವಾಗುವುದು. ದೇವರ ಹೆಸರನ್ನು ಉಚ್ಚರಿಸುವಾಗ ಅವನನ್ನು ನಿನ್ನ ಮನಸ್ಸಿನಲ್ಲಿಯೂ ಜ್ಞಾಪಿಸಿಕೊಳ್ಳಬೇಕು. ಇಂತಹ ಉಚ್ಚಾರಣೆ ಮತ್ತು ಮನನದಿಂದ ಹೆಚ್ಚು ಪ್ರಯೋಜನವಾಗುವುದು. ಭಗವಂತನನ್ನು ಜ್ಞಾಪಿಸಿಕೊಳ್ಳದೆ ಸುಮ್ಮನೆ ಉಚ್ಚರಿಸುವುದರಿಂದ ಹೆಚ್ಚು ಪ್ರಯೋಜನವಿಲ್ಲ. ಇದು ಸುಲಭವೆಂದು ನಾನೇನೂ ಹೇಳುವುದಿಲ್ಲ. ಹೀಗೆ ಮಾಡಬೇಕಾದರೆ ಗುರುವಿನಿಂದ ಉಪದೇಶಪಡೆದಿರಬೇಕು.

ಗುರು ನಿನ್ನ ಆಧ್ಯಾತ್ಮಿಕವಿಕಾಸಕ್ಕೆ ಬೇಕಾಗುವ ಇಷ್ಟದೇವತೆ ಮುಂತಾದುವನ್ನೆಲ್ಲ ಅವನೇ ನಿಷ್ಕರ್ಷಿಸುವನು. ಪ್ರತಿಯೊಬ್ಬರ ಪ್ರಕೃತಿಗೆ ತಕ್ಕಂತೆ ಹಲವು ಇಷ್ಟದೇವತೆಗಳಿವೆ. ಒಂದೇ ಎಲ್ಲರಿಗೂ ಸರಿಹೋಗು ವುದಿಲ್ಲ. ನಿನ್ನಲ್ಲಿ ಆಧ್ಯಾತ್ಮಿಕಜ್ಞಾನ ಉದಿಸುವವರೆಗೆ ಗುರುವಿನ ಸಲಹೆ ಯನ್ನು ಅನುಸರಿಸಬೇಕು. ಹೆಚ್ಚು ಕೆಲಸ (ಒಳ್ಳೆಯ) ಮಾಡಿದಷ್ಟೂ ಹೆಚ್ಚು ಪವಿತ್ರನಾಗುವೆ.

ಗುರುವಿನ ಸಹಾಯವಿಲ್ಲದೆ ಸಾಧನೆಮಾಡುವುದು ಯಾವಾಗಲೂ ಬಹಳ ಕಷ್ಟ. ಎಲ್ಲೋ ಕೆಲವು ಮಂದಿ ಅಸಾಧ್ಯ ಮಾನಸಿಕ ಶಕ್ತಿಯುಳ್ಳ ವರು ಮಾತ್ರ ಬಾಹ್ಯ ಸಹಾಯವಿಲ್ಲದೆ ಮುಂದುವರಿಯಬಲ್ಲರು. ಒಬ್ಬ ಗುರುವಿನ ನೇತೃತ್ವದಲ್ಲಿ ಸಾಧನೆಮಾಡುವುದು ಒಳ್ಳೆಯದು. ಆಗ ತಪ್ಪನ್ನು ಮಾಡಲಾರೆವು. ಗುರು ಇಲ್ಲವೆಂದು ನೀನು ಸುಮ್ಮನೆ ಕುಳಿತಿರಬಾರದು. ಸಾಧನೆ ಪ್ರಾರಂಭಿಸು. ಸಕಾಲದಲ್ಲಿ ಗುರು ದೊರಕುವನು.

ಗುರು ಶಿಷ್ಯನನ್ನು ಆರಿಸಿಕೊಳ್ಳಬೇಕು. ಶಿಷ್ಯ ಗುರುವನ್ನು ಆರಿಸಿ ಕೊಳ್ಳಬೇಕು. ಇಲ್ಲದೆ ಒಬ್ಬನು ಮಾತ್ರ ಆರಿಸಿಕೊಂಡರೆ ಪ್ರಯೋಜನವಿಲ್ಲ. ಸಿದ್ಧಗುರು ಮಾತ್ರ ಶಿಷ್ಯನಿಗೆ ಸಹಾಯಮಾಡಬಲ್ಲ. ಶಿಷ್ಯರ ಪ್ರಕೃತಿ ಭೇದಕ್ಕೆ ತಕ್ಕಂತೆ ಇವರುಮಾತ್ರ ಉಪದೇಶವನ್ನು ಕೊಡಬಲ್ಲರು. ಇಂತಹ ವರು ಯಾವ ಸಮಯದಲ್ಲಿ ಯಾರಿಗೆ ಬೇಕಾದರೂ ಉಪದೇಶವನ್ನು ಕೊಡಲು ಸಿದ್ಧರಾಗಿರುವರು. ಸರಿಯಾದ ಕಾಲ ಪ್ರಾಪ್ತವಾದರೆ ದೇವರು ನಿನ್ನ ಗುರುವನ್ನು ಕಳುಹಿಸುವನು. ಅಂತಹ ಗುರು ದೊರಕುವವರೆಗೆ ನಿನ್ನ ಕರ್ತವ್ಯ ದೇವರನ್ನು ಪೂಜಿಸುವುದು. ಇಲ್ಲದಿದ್ದರೆ ವೃಥಾಕಾಲಹರಣ ಮಾಡುವೆ. ತಪ್ಪದೆ ಧ್ಯಾನ, ಜಪ, ಭಜನೆಮಾಡು.

ನೀನು ಧ್ಯಾನದಲ್ಲಿ ಮುಂದುವರಿದಂತೆಲ್ಲ ಹೆಚ್ಚುಹೆಚ್ಚು ಅನುಭವ ಗಳಾಗುವುವು. ಸುಮ್ಮನೆ ಶಾಸ್ತ್ರ ಓದಿ ಚರ್ಚಿಸುವುದರಿಂದ ಪ್ರಯೋಜನವಿಲ್ಲ. ಧ್ಯಾನದಿಂದ ಮನಸ್ಸು ಶುದ್ಧವಾಗುವುದು. ಮನಸ್ಸು ಶುದ್ಧಿಯಾದೊಡನೆ ಭಗವದ್ದರ್ಶನ ಆಗುವುದು. ಸಾಧಾರಣನಮ್ಮ ಮನಸ್ಸು ಪ್ರಾಪಂಚಿಕ ವಸ್ತುಗಳಮೇಲೆ ಇರುವುದು. ಇದರಿಂದ ಯಾವ ಯೋಗ್ಯ ಪ್ರತಿಫಲವೂ ಬರುವುದಿಲ್ಲ. ನಿನ್ನ ಮನಸ್ಸು ಶುದ್ಧಭಗವಂತನ ಆಲೋಚನೆಯಲ್ಲಿಯೇ ನೆಲಸಿದರೆ ನಿಜವಾದ ಆನಂದಾನುಭವವಾಗುವುದು.

ನಿಮ್ಮ ಶಕ್ತಿಯೆಲ್ಲ ಪ್ರಾಪಂಚಿಕವಸ್ತುಗಳಮೇಲೆ ವ್ಯರ್ಥವಾಗುತ್ತಿದೆ. ಸ್ವಲ್ಪ ಕಷ್ಟಪಟ್ಟು ದೇವರನ್ನು ಪೂಜೆಮಾಡು. ನಿಮ್ಮ ಜೀವನವನು

ವೃಥಾವ್ಯರ್ಥಮಾಡಿಕೊಳ್ಳಬಾರದು. ಇಂದಿನಿಂದಲೇ ದೇವರ ಪೂಜೆಯನ್ನು ಪ್ರಾರಂಭಿಸು. ನಮ್ಮ ಆಯಸ್ಸು ಬಹಳ ಅಲ್ಪ. ಈ ಅಲ್ಪ ಆಯಸ್ಸಿನಲ್ಲಿ ನಮ್ಮ ಮುಖ್ಯವಾದ ಕರ್ತವ್ಯವೇ ದೇವರ ಪೂಜೆ. ನಾವು ಆ ಕಾಲವನ್ನು ವೃಥಾವ್ಯರ್ಥಮಾಡಿದರೆ ಪುನಃ ಅದನ್ನು ಗಳಿಸಲಾರೆವು. ನೀನು ಯಾವ ಕೆಲಸವನ್ನು ಮಾಡುತ್ತಿದ್ದರೂ ದೇವರನ್ನು ಯಾವಾಗಲೂ ಆಲೋಚಿಸು. ದಿನದಲ್ಲಿ ಕೆಲವು ಗಳಿಗೆ ಮೂಲೆಯಲ್ಲಿ ಕುಳಿತು ಕಣ್ಣುಮುಚ್ಚಿಕೊಂಡರೆ ಸಾಲದು. ಆಗ ಇಡೀ ಪ್ರಪಂಚವೇ ನಿಮ್ಮ ಮುಂದೆ ಬರುತ್ತಿರುವುದು.

ದ್ವೈತದಿಂದ ಪ್ರಾರಂಭಿಸುವುದು ಒಳ್ಳೆಯದು. ಈ ದಾರಿಯಲ್ಲಿ ನೀನು ಸ್ವಲ್ಪದೂರ ಮುಂದುವರಿದರೆ ಸ್ವಾಭಾವಿಕವಾಗಿ ಅದ್ವೈತಕ್ಕೆ ಹೋಗುವೆ. ನಮ್ಮಿಂದ ದೇವರನ್ನು ಹೊರಗೆ ನೋಡುವುದು ಸರಿಯಾದ ಮಾರ್ಗ. ಅನಂತರ ದೇವರನ್ನು ನಿಮ್ಮಲ್ಲಿಯೂ ನೋಡುವಿರಿ. ಇದೇ ಪರಮಧ್ಯಾನ. ದೇವರು ಸರ್ವವ್ಯಾಪಿಯಲ್ಲವೆ? ಆನಂದಾನುಭವವಾಗುವ ವರೆಗೂ ಧ್ಯಾನವನ್ನು ಅಭ್ಯಾಸಮಾಡಬೇಕು. ಅಲ್ಲಿಯವರೆವಿಗೂ ದ್ವೈತ ಆವಶ್ಯಕ. ಸಮಾಧಿಸ್ಥಿತಿಯಲ್ಲಿ ದೇವರನ್ನು ಮಾತ್ರ ನೋಡುವೆ. ಆತ್ಮ ಸಾಕ್ಷಾತ್ಕಾರದ ಅನುಭವವನ್ನು ಯಾರೂ ವರ್ಣನೆಮಾಡಲಾರರು. ಎಲ್ಲಿಯವರೆವಿಗೂ ಭಗವಂತನ ಆಲೋಚನೆ ನಿನ್ನಲ್ಲಿ ಇರುವುದೋ ಅಲ್ಲಿಯ ವರೆವಿಗೂ ಪಾಪ ನಿನ್ನನ್ನು ಏನೂ ಮಾಡಲಾರದು.

೨೫

## ಕೆಲವು ಸಲಹೆ

i

ಶಿಷ್ಯ: ಸ್ವಾಮಿಜಿ, ನೀವು ಅಂದು ಮನಸ್ಸನ್ನು ಎರಡು ರೀತಿ ಸ್ತಿಮಿತಕ್ಕೆ ತರಬಹುದೆಂದು ಅಪ್ಪಣೆ ಕೊಡಿಸಿದಿರಿ. ಅದರಲ್ಲಿ ನಾನು ಯಾವುದನ್ನು ಅನುಸರಿಸಬೇಕು?

ಸ್ವಾಮಿಜಿ: ಮನಸ್ಸನ್ನು ನಿನ್ನ ಇಷ್ಟದೇವತೆಯ ಪಾದದಲ್ಲಿ ಸ್ಥಿರ ವಾಗಿ ನಿಲ್ಲಿಸು.

ಶಿಷ್ಯ: ನನ್ನ ಇಷ್ಟದೇವತೆಯ ಮಂಗಳಮೂರ್ತಿಯನ್ನು ಎಲ್ಲಿ ಧ್ಯಾನಿಸುವುದು.

ಸ್ವಾಮಿಜಿ: ಹೃದಯದಲ್ಲಿ.

ಶಿಷ್ಯ: ಹೃದಯದಲ್ಲೇ! ಅದು ಹೇಗೆ ಸಾಧ್ಯ, ಪೂಜ್ಯ ಸ್ವಾಮಿಜಿ?

ಸ್ವಾಮಿಜಿ: ನೀನು ಧ್ಯಾನಮಾಡುತ್ತಿರುವಾಗ ಇಷ್ಟದೇವರು ನಿನ್ನ ಮೇಲೆ ತನ್ನ ಕೃಪಾಕಟಾಕ್ಷವನ್ನು ಬೀರುತ್ತಿರುವನು ಎಂದು ಭಾವಿಸು.

ಶಿಷ್ಯ: ಆದರೆ ಹೃದಯುವಲ್ಲಿ ರಕ್ತಮಾಂಸವಿದೆ. ಅಲ್ಲಿ ನನ್ನ ಇಷ್ಟನನ್ನು ಹೇಗೆ ಧ್ಯಾನಿಸುವುದು? ಅವನು ನಮ್ಮ ರಕ್ತಮಾಂಸಮೂಳೆಯಲ್ಲಿರುವನೆ? ನಾನು ಅವನನ್ನು ಹೀಗೆ ಭಾವಿಸಲಿ.

ಸ್ವಾಮಿಜಿ: ಮೂಳೆಮಾಂಸವನ್ನು ನೀನು ಯೋಚಿಸಬೇಕಾಗಿಲ್ಲ. ನಿನ್ನ ಇಷ್ಟದೇವತೆ ಹೃದಯಮಧ್ಯದಲ್ಲಿರುವುದು. ಈ ಭಾವನೆಯಲ್ಲಿ ಧ್ಯಾನಮಾಡು. ಮೊದಲು ಕೆಲವುಸೇಳೆ ದೇಹದ ಆಲೋಚನೆ ಬರುವುದು. ಆದರೆ ನಂತರ ಬರುವುದಿಲ್ಲ. ಇದನ್ನು ಸಂಪೂರ್ಣ ಮರೆಯುವೆ. ನಿನ್ನ ಇಷ್ಟದೇವತೆ ಮಾತ್ರ ಮನಸ್ಸಿನಲ್ಲಿ ರಾರಾಜಿಸುತ್ತಿರುವುದು.

ಶಿಷ್ಯ: ನಾನು ನನ್ನ ಇಷ್ಟದೇವತೆಯನ್ನು ವಿಗ್ರಹ ಅಥವಾ ಚಿತ್ರದಲ್ಲಿ ಕಾಣುವಂತೆ ಭಾವಿಸಿಕೊಳ್ಳಬೇಕೆ? ಅಥವಾ ಇನ್ನು ಯಾವುದಾದರೂ ರೀತಿ ಮಾಡಬೇಕೆ?

ಸ್ವಾಮಿಜಿ: ಅದನ್ನು ಚಿತ್ರದಂತೆ ಭಾವಿಸಬೇಕಾಗಿಲ್ಲ. ಸಜೀವವಾಗಿ, ಕಾಂತಿಯಿಂದ ಕೂಡಿರುವಂತೆ ಭಾವಿಸು.

ii

ಶಿಷ್ಯ: ಜಪಮಾಡುವ ಕಾಲದಲ್ಲಿ ಅದರ ಅರ್ಥದಮೇಲೂ ಧ್ಯಾನಿಸಬೇಕೆಂದು ಶಾಸ್ತ್ರದಲ್ಲಿ ಓದಿರುವೆನು. ಅದನ್ನೇ ಕೆಲವರು ಹೇಳುವುದನ್ನೂ ಕೇಳಿರುವೆನು. ಈ ಅರ್ಥವನ್ನು ಹೇಗೆ ಆಲೋಚಿಸುವುಧು. ಪದಶಃ ಅಥವಾ ಪೂರ್ತಿ ಮಂತ್ರವನ್ನೊ?

ಸ್ವಾಮಿಜಿ: ಹಾಗಲ್ಲ. ಮನುಷ್ಯನನ್ನು ಹೆಸರುಹಿಡಿದುಕೂಗುವಂತೆ. ನಿನ್ನ ಹೆಸರನ್ನು ಕೇಳಿದೊಡನೆಯೆ ನಿನ್ನ ಆಕಾರವೂ ಮನಸ್ಸಿಗೆ ಹೊಳೆಯುವುದು. ಇದರಂತೆಯೆ ಮಂತ್ರ ಮತ್ತು ಅದರಿಂದ ಜನಿಸುವ ಆಕಾರಕೂಡ.

ಶಿಷ್ಯ: ನಾನು ಜಪವನ್ನು ಹೇಗೆ ಮಾಡಲಿ? ಮನಸ್ಸಿನಲ್ಲಿಯೊ ಅಥವಾ ನಿಧಾನವಾಗಿ ಉಚ್ಚರಿಸುತ್ತ ಮಾಡಲೆ?

ಸ್ವಾಮಿಜಿ: ನೀನೊಬ್ಬನೇ ಏಕಾಂತ ಸ್ಥಳದಲ್ಲಿರುವಾಗ ನಿನಗೆ ಮಾತ್ರ ಕೇಳುವಂತೆ ಮಾಡು. ಯಾರಾದರೂ ಹತ್ತಿರ ಇದ್ದರೆ ಮನಸ್ಸಿನಲ್ಲೆ ಮಾಡಬೇಕು. ಎರಡು ಪ್ರಸಂಗದಲ್ಲಿಯೂ ತುಟಿ ಅಲ್ಲಾಡಬೇಕು.

iii

ಶಿಷ್ಯ: ಕಳೆದ ಕೆಲವು ದಿನಗಳಿಂದ ನಾನು ಧ್ಯಾನಮಾಡುವಾಗ ಮಂತ್ರ ನನ್ನ ಕಣ್ಣೆದುರಿಗೆ ಪ್ರಕಾಶಮಾನವಾಗಿ ಕಾಣುತ್ತಿದೆ. ಆಗ ನನಗೆ ಇಷ್ಟದೇವತೆ ಕಾಣುವುದಿಲ್ಲ. ಮಂತ್ರ ಒಂದೇ ಕಾಣುವುದು. ಆಗ

ನಾನೇನು ಮಾಡಲಿ. ಮನಸ್ಸಿನಿಂದ ಮಂತ್ರವನ್ನು ದೂಡಿ ಅಲ್ಲಿ ಇಷ್ಟ ದೇವತೆಯನ್ನು ಕುರಿತು ಧ್ಯಾನಮಾಡಲೆ ?

ಸ್ವಾಮಿಜಿ : ಅದೊಳ್ಳೆಯದು. ಇದೊಂದು ಶುಭ ಚಿಹ್ನೆಯೇ ಸರಿ. ಹೌದು ನಿಜವಾಗಿ ಅದು ಒಳ್ಳೆಯದು. ಎರಡನ್ನೂ ಆಲೋಚಿಸಬೇಕಾಗಿದೆ. ಮಂತ್ರ ಆಕಾರದ ಮೂಲಕ ವ್ಯಕ್ತವಾಗುವ ಬರಬ್ರಹ್ಮನಲ್ಲದೆ ಬೇರಲ್ಲ. ನೀನು ಮನಸ್ಸಿನಿಂದ ಹೊರದೂಡಬೇಕಾಗಿಲ್ಲ. ಮಂತ್ರ ಮತ್ತು ಅದಕ್ಕೆ ಸಂಬಂಧಪಟ್ಟ ಪವಿತ್ರ ಆಕಾರ ಎರಡನ್ನೂ ಕುರಿತು ಯೋಚಿಸು. ಯಾವುದನ್ನೂ ಮರೆಯಬೇಕಾಗಿಲ್ಲ.

ಶಿಷ್ಯ : ಸ್ವಾಮಿಜಿ, ನನ್ನ ಇಷ್ಟದೇವತೆಯ ಯಾವ ಭಾಗವನ್ನು ಕುರಿತು ನಾನು ಮೊದಲು ಧ್ಯಾನಿಸಲಿ. ಮುಖ ಅಥವಾ ಯಾವುದಾದರೂ ಭಾಗವೆ ?

ಸ್ವಾಮಿಜಿ. ಮೊದಲು ಅವನ ಪಾದಪದ್ಮಗಳಿಗೆ ನಮಸ್ಕರಿಸಿ ಅಲ್ಲಿಂದ ಪ್ರಾರ್ಥಿಸು. ನಂತರ ಮುಖ, ಕೈಕಾಲು ಯಾವುದು ಮನಸ್ಸಿನಲ್ಲಿ ಏಳುವುದೋ ಅದರಮೇಲೆ

ಶಿಷ್ಯ : ಮಂತ್ರ ಯಾತಕ್ಕೆ ಇಷ್ಟು ದೊಡ್ಡದು.

ಸ್ವಾಮಿಜಿ : ಹೌದು ಕೆಲವುವೇಳೆ ಮಂತ್ರ ದೀರ್ಘವಾಗುವುದು. ಸಣ್ಣದೊ, ದೊಡ್ಡದೊ, ಅದರಲ್ಲಿ ಒಂದು ಪ್ರತ್ಯೇಕ ಶಕ್ತಿ ಇದೆ. ಬಿಡದೆ ಜಪಮಾಡಿದರೆ ಅದು ಬೇಗ ಗೊತ್ತಾಗುವುದು.

ಶಿಷ್ಯ : ಜಪಮಾಡುವಾಗ ನಾಲ್ಕನೆ ಬೆರಳು ಮಾಲೆಗೆ ತಗಲಿದರೆ ಪಾಪವೆಂದು ಕೆಲವರು ಹೇಳುತ್ತಾರೆ. ಅದು ಏತಕ್ಕೆ ಸ್ವಾಮಿಜಿ ?

ಸ್ವಾಮಿಜಿ : ನೀನು ನಾಲ್ಕನೆ ಬೆರಳಿನಲ್ಲಿ ಜಪಮಾಡುವೆಯೇನು ? ಆಗಲಿ, ಹಾಗೆಯೆ ಮಾಡು. ನೀನು ನಾಲ್ಕನೆ ಬೆರಳಿನಮೇಲೆ ಜಪ ಮಾಡಲು ಇಚ್ಛಿಸಿದರೆ ಯಾವ ಅನುಮಾನವೂ ಇಲ್ಲದೆ ಹಾಗೆಯೆ ಮಾಡು. ಇದರಿಂದ ಪಾಪಗೀಪವೇನೂ ಬರುವುದಿಲ್ಲ.

iv

ಶಿಷ್ಯ : ನಾನು ಮನಸ್ಸನ್ನು ಹೇಗೆ ಸ್ಥಿಮಿತಕ್ಕೆ ತರಲಿ ಸ್ವಾಮಿಜಿ.

ಸ್ವಾಮಿಜಿ : ಪ್ರತಿದಿನ ತಪ್ಪದೆ ಸಾಧನೆಮಾಡಿದರೆ ಮನಸ್ಸನ್ನು ಸ್ಥಿರ ವಾಗಿ, ದೃಢವಾಗಿ ಮಾಡಬಹುದು. ಇದಕ್ಕೆ ಬೆಳಗಿನಝಾವ ಬಹಳ ಪ್ರಶಸ್ತ. ಧ್ಯಾನಕ್ಕೆ ಮುಂಚೆ ಯಾವುದಾದರೂ ಪವಿತ್ರಗ್ರಂಥವನ್ನು ಓದಿದರೆ ಏಕಾಗ್ರತೆಗೆ ಸುಲಭ. ಧ್ಯಾನವಾದಮೇಲೆ ಅರ್ಧ ಗಂಟೆ ಹೊತ್ತು

ಮೌನವಿಶ್ರಾಂತಿ ಬೇಕು. ಧ್ಯಾನಮಾಡುವಾಗ ಅದರ ಪ್ರತಿಫಲ ಕೆಲವು ವೇಳೆ ತಕ್ಷಣ ಬರದೆ ಇರಬಹುದು. ಅನಂತರ ಬರುವುದು. ಆದಕಾರಣವೆ ಧ್ಯಾನಮಾಡಿದೊಡನೆಯೆ ಲೌಕಿಕ ವಿಷಯಕ್ಕೆ ಗಮನಕೊಟ್ಟರೆ ಒಟ್ಟಿನಲ್ಲಿ ಇದರಿಂದ ನಿನಗೆ ಹಾನಿ ಮತ್ತು ಆಧ್ಯಾತ್ಮಿಕ ಜೀವನದ ವಿಕಾಸಕ್ಕೆ ಅಡ್ಡಿ ಬರುವುದು.

ಜಪ, ಧ್ಯಾನ ಇವೇ ಮನಸ್ಸಿಗೆ ಆಹಾರ. ಅವೇ ನಾವು ಮಾಡಬೇಕಾದ ಪ್ರಥಮ ಮತ್ತು ಮುಖ್ಯ ಕರ್ತವ್ಯ. ಮೊದಲು ಸರಿಯಾಗಿ ಧ್ಯಾನ ಮತ್ತು ಜಪವನ್ನು ಮಾಡುವುದಕ್ಕೆ ಆಗದೇ ಇದ್ದರೂ ಅಭ್ಯಾಸವನ್ನು ಬಿಡಕೂಡದು. ಅಭ್ಯಾಸಬಲದಿಂದಲೇ ನಾವು ಎಷ್ಟೋ ಸಾಧಿಸಬಹುದು. ಪ್ರತಿದಿನ ಎರಡುಘಂಟೆ ಧ್ಯಾನ, ಜಪ ಅರ್ಧಘಂಟೆ ವಿಶ್ರಾಂತಿ ಇವನ್ನು ಎಲ್ಲರೂ ಮಾಡಬೇಕು. ಸಾಧಕನಿಗೆ ಏಕಾಂತವಾಸವೂ ಬಹಳ ಪ್ರಯೋಜನಕಾರಿ. ಒಂದು ತೋಟದ ಮೂಲೆಯ ನಿರ್ಜನಪ್ರದೇಶದಲ್ಲೋ, ನದೀತೀರದಲ್ಲೋ, ಒಂದು ಏಕಾಂತದಲ್ಲೊ ಸ್ವಲ್ಪಹೊತ್ತು ಕಳೆಯುವುದರಿಂದಲೇ ಎಷ್ಟೋ ಪ್ರಯೋಜನವಾಗುವುದು. ಆಧ್ಯಾತ್ಮಿಕ ಜೀವನಕ್ಕೆ ಮುಂಚೆ ಒಂದು ನಿತ್ಯಕಾರ್ಯಕ್ರಮವನ್ನು ಮಾಡಿಕೊಳ್ಳಬೇಕು. ಈ ಕಾರ್ಯಕ್ರಮಕ್ಕೆ ಆತಂಕವಾಗುವ ಯಾವ ಕೆಲಸವನ್ನೂ ನೀನು ತೆಗೆದುಕೊಳ್ಳಕೂಡದು.

V

ಶಿಷ್ಯ: ಧ್ಯಾನಮಾಡುವಾಗ ನನ್ನ ಇಷ್ಟದೇವತೆ ಅಲ್ಲದೆ ಬೇರೆ ದೇವದೇವತೆಗಳು ಬಂದರೆ ನಾನು ಏನು ಮಾಡಬೇಕು.

ಸ್ವಾಮಿಜಿ: ಇದು ಒಂದು ಶುಭ ಚಿಹ್ನೆ ಎಂದು ತಿಳಿ. ನಿನ್ನ ಇಷ್ಟವೇ ಹಲವು ರೂಪಿನಲ್ಲಿ ಕಾಣಿಸಿಕೊಳ್ಳಬಹುದು. ಅವನು ಏಕ ಮತ್ತು ಅನೇಕವಾಗಿರುವನು. ನಿನ್ನ ಇಷ್ಟದೇವತಾದರ್ಶನದಿಂದ ಸಂತುಷ್ಟನಾಗು. ಕೊನೆ ಈ ದಿವ್ಯದರ್ಶನಗಳೆಲ್ಲ ನಿನ್ನ ಇಷ್ಟದೇವತೆಯಲ್ಲಿ ತಲ್ಲೀನವಾಗುವುದು ನಿನಗೆ ಕಾಣುವುದು.

ಅಮಾವಾಸ್ಯೆ, ಪೌರ್ಣಿಮೆ, ಅಷ್ಟಮಿ, ಕಾಳಿಕಾಪೂಜೆ, ಜಗದ್ಧಾತ್ರಿ, ದುರ್ಗಾಪೂಜೆ ಸಮಯದಲ್ಲಿ ಹೆಚ್ಚು ಜಪ ಧ್ಯಾನಮಾಡಬೇಕು. ಎಲ್ಲಾ ಸ್ತ್ರೀಯರನ್ನೂ ನಿನ್ನ ತಾಯಿಯಂತೆ ಕಾಣು. ಇತರರಿಗೆ ಮಾತುಕೊಡುವಾಗ, ಖಂಡಿತಮಾಡುತ್ತೇನೆ ಎನ್ನುವ ಬದಲು ನಾನು ಪ್ರಯತ್ನಪಡುತ್ತೇನೆ ಎನ್ನು. ಏಕೆಂದರೆ ನೀವು ಮಾತುಕೊಟ್ಟಂತೆ ಮಾಡಲು ಸಾಧ್ಯ

ವಾಗದೆ ಇರಬಹುದು.

ಶಿಷ್ಯ: ಸ್ವಾಮಿಜಿ, ನೀವು ಯಾವಾಗಲೂ ತಂದೆಯನ್ನು ಸೇವಿಸು ಎಂಬುದನ್ನೇ ಒತ್ತಿ ಹೇಳುತ್ತಿರುವಿರಿ. ಎಲ್ಲವನ್ನೂ ತ್ಯಜಿಸಿ, ಸನ್ಯಾಸಿಯಾಗಿ, ನಿಮ್ಮನ್ನು ಸೇವಿಸಲು ಅವಕಾಶ ದೊರಕದೆ ಇರುವುದು ನನ್ನ ದುರದೃಷ್ಟವಲ್ಲವೆ?

ಸ್ವಾಮಿಜಿ: ಸನ್ಯಾಸಿ! ನೀನು ಆಗಲೇ ಆಗಿರುವೆ. ನೀನು ಕಾವಿಯನ್ನು ಮಾತ್ರ ತೆಗೆದುಕೊಂಡಿಲ್ಲ. ಕಾವಿಮಾತ್ರ ನಿನ್ನನ್ನು ಸನ್ಯಾಸಿ ಮಾಡಲಾರದು.

ಶಿಷ್ಯ: ಶ್ರೀರಾಮಕೃಷ್ಣ ಸಂಘಕ್ಕೆ ಸೇರಿ, ಸನ್ಯಾಸಿಯಾಗಿ ನಿಮ್ಮನ್ನು ಸೇವಿಸುವುದು ಒಂದು ಭಾಗ್ಯವಲ್ಲವೆ?

ಸ್ವಾಮಿಜಿ: ಹೌದು, ಅದೇನೋ ನಿಜ. ಖಾಯಿಲೆಯಾಗಿರುವ ನಿನ್ನ ತಂದೆಯನ್ನು ಸೇವಿಸಿದರೂ ಅದೇ ಪುಣ್ಯ ಬರುವುದು. ಮದುವೆ ಮುಂತಾದುವುಗಳಿಂದ ನೀನು ಸಂಸಾರಕ್ಕೆ ಸಿಕ್ಕಿ ಬೀಳದೆ ಇದ್ದರೆ ಅಂಜಬೇಕಾಗಿಲ್ಲ. ಮಗು, ನಾನು ಮತ್ತೊಮ್ಮೆ ಹೇಳುತ್ತೇನೆ. ನಿನ್ನ ತಂದೆಯನ್ನು ಸೇವಿಸು. ಜತೆಗೆ, ಜಪ, ಧ್ಯಾನ, ಅಧ್ಯಯನವನ್ನೂ ಮಾಡು.

೨೬

## ಈಶ್ವರ ಚಿಂತನೆ

ಶಿಷ್ಯ: ಸ್ವಾಮಿಜಿ, ನಾನು ಸೇವಾಕಾರ್ಯಗಳಲ್ಲಿ ನಿರತನಾಗಿರುವಾಗ, ದಿನವೆಲ್ಲ ಕಷ್ಟಪಟ್ಟು ಕೆಲಸಮಾಡಬೇಕಾಗುವುದು. ಧ್ಯಾನ, ಜಪಮಾಡುವುದಕ್ಕೆ ಅವಕಾಶವೇ ಇರುವುದಿಲ್ಲ. ಅದಕ್ಕೇ ನನಗೆ ಅಂತಹ ಕೆಲಸವನ್ನು ಮಾಡುವುದಕ್ಕೆ ಇಚ್ಛೆಯಿಲ್ಲ.

ಸ್ವಾಮಿಜಿ: ನೀನು ಯಾವಾಗಲೂ ಹೀಗೆ ಕೆಲಸಮಾಡಬೇಕೇನು?

ಶಿಷ್ಯ: ಇಲ್ಲ, ಮೊದಲು ಕೆಲವು ದಿನಗಳು ಮಾತ್ರ.

ಸ್ವಾಮಿಜಿ: ಹಾಗಾದರೆ ಕಾಲಸಿಕ್ಕುವುದಿಲ್ಲವೆಂದು ಏತಕ್ಕೆ ಹೇಳುವೆ. ಸಾಧಾರಣ ಗೃಹಸ್ಥ ಪ್ರಾಪಂಚಿಕ ಕೆಲಸಗಳಿಂದ ಆಧ್ಯಾತ್ಮಿಕ ಸಾಧನೆಗೆ ಸಮಯವೇ ಇಲ್ಲವೆಂದು ಹೇಳುವನು. ಸಾಧು ಹೀಗೆ ಹೇಳುವುದು ಯೋಗ್ಯವಲ್ಲ. ನಿನ್ನಲ್ಲಿ ಬ್ರಹ್ಮಚರ್ಯ ಶಕ್ತಿ ಇದೆ. ನೀನು ಲೌಕಿಕ ಮತ್ತು ಆಧ್ಯಾತ್ಮಿಕ ಕೆಲಸಗಳೆರಡನ್ನೂ ಒಟ್ಟಿಗೆ ಮಾಡಬೇಕು. ಆಧ್ಯಾತ್ಮಿಕ ಜೀವನಕ್ಕೆ ಹೆಚ್ಚು ಆಸಕ್ತಿ ನಿನ್ನ ಮನಸ್ಸಿನಲ್ಲಿ ಇಲ್ಲವೆಂದು ತೋರುವುದು. ಕೆಲಸಕ್ಕೆ ಬಾರದ ಕೆಲಸ ತಮಾಷೆಯಲ್ಲಿ ಕಾಲಕಳೆಯಲಿಚ್ಛಿಸುವೆ. ಕಾಲ

ವಿಲ್ಲವೆನ್ನುವುದು ಒಂದು ನೆಪ. ಸೇವಾಕಾರ್ಯಗಳಲ್ಲಿ ಮೊದಲು ಸ್ವಲ್ಪದಿನ ಬಹಳ ಕಷ್ಟದ ದಿನಗಳೆಂಬುದನ್ನೇನೊ ನಾನು ಒಪ್ಪಿಕೊಳ್ಳುವೆ. ಆದರೆ ಈ ಸ್ಥಿತಿ ಬಹಳದಿನ ಇರುವುದಿಲ್ಲ. ಅನಂತರ ನೀನು ಏನುಮಾಡುವೆ. ಆಗ ಏತಕ್ಕೆ ನೀನು ಸಾಧನೆಮಾಡಬಾರದು. ಹೀಗೆ ದೂರುವುದಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೆ.

ಯಾರಿಗೆ ನಿಜವಾಗಿಯೂ ಸಾಧನೆಯಮೇಲೆ ಮನಸ್ಸಿದೆಯೋ ಅವರು ಎಲ್ಲಾ ಸ್ಥಿತಿಯಲ್ಲಿಯೂ ಅದನ್ನು ಮಾಡುವರು. ಅವಕಾಶವಾದಾಗ ಹೆಚ್ಚುಮಾಡುವರು. ಯಾರು ಯಾವಾಗಲೂ ಸ್ಥಳ ಸರಿಯಾಗಿಲ್ಲ, ಕಾಲವಿಲ್ಲವೆಂದು ಗೊಣಗಾಡುವರೊ ಅವರು ಜೀವನದಲ್ಲಿ ಮುಂದುವರಿಯುವುದಿಲ್ಲ. ಸುಮ್ಮನೆ ಅಲೆದಾಡಿ ಪ್ರಶಸ್ತವಾದ ಸಮಯವನ್ನು ವ್ಯರ್ಥ ಮಾಡಿಕೊಳ್ಳುವರು.

ಹೃತ್ಪೂರ್ವಕ ಸಾಧನೆಮಾಡು ಅದರಲ್ಲೇ ತನ್ಮಯನಾಗು. ಓ! ಅದರಿಂದ ಬರುವ ಆನಂದ! ಒಮ್ಮೆ ನಿನಗೆ ಅದರ ಆನಂದದ ಸವಿ ದೊರೆತರೆ ಉಳಿದವೆಲ್ಲ ಸಪ್ಪೆಯಾಗುವುದು. ನಂತರ ದೇವರು ನಿನ್ನನ್ನು ಎಲ್ಲಿ ಎಂತಹ ಸನ್ನಿವೇಶದಲ್ಲಿ ಇಟ್ಟರೂ ಸಾಧನೆಯ ಅಭಿರುಚಿ ಹೋಗುವುದಿಲ್ಲ. ನಿಜ, ಮೊದಲೇ ನಿನಗೆ ಆ ಆನಂದ ದೊರಕುವುದಿಲ್ಲ. ಗುರುವಿನ ಮಾತಿನಲ್ಲಿ ನಂಬು. ನೀನು ಸಾಧನೆ ಸ್ವಲ್ಪದಿನ ಮಾಡಿದರೆ ಹುಡುಕದೇಇದ್ದರೂ ಅದು ದೊರಕುವುದು.

ಜಪ, ಧ್ಯಾನಮಾಡುವುದಕ್ಕೆ ಕಾಲ ಮತ್ತು ಇತರ ಅನುಕೂಲ ಆವಶ್ಯಕ. ಅವರ ಸ್ಮರಣ, ಮನನಕ್ಕೆ ಇದಾವುದೂ ಬೇಕಾಗಿಲ್ಲ. ಕೆಲಸವಿರುವಾಗ, ಇಲ್ಲದೇ ಇರುವಾಗ, ಊಟಮಾಡುವಾಗ ಅಥವಾ ಒಬ್ಬನೇ ಇರುವಾಗ ನಾವು ಅಭ್ಯಾಸಮಾಡಬಹುದು. ಈ ಅಭ್ಯಾಸವನ್ನು ರೂಢಿಸಬೇಕು. ಇದರಲ್ಲಿ ಪಳಗಿದ ಮೇಲೆ ದೇವರೆಡೆಗೆ ನೀನು ಎಷ್ಟೋ ಮುಂದುವರಿದಂತೆ. ಶ್ರೀರಾಮಾನುಜಾಚಾರ್ಯರ ದೃಷ್ಟಿಯಲ್ಲಿ ಇಂತಹ ಸತತ ಮನನವೇ ಧ್ಯಾನ.

ಕೆಲಸಕ್ಕೆ ನೀನು ಏತಕ್ಕೆ ಇಷ್ಟು ಅಂಜಬೇಕೊ ನನಗೆ ಗೊತ್ತಿಲ್ಲ. ಪ-ಮುಂತಾದವರೆಲ್ಲ ಸಾಧುಗಳು. ಅವರು ಏನನ್ನು ಹೇಳುತ್ತಾರೊ ಅದನ್ನು ನೀನು ಮಾಡಬೇಕು. ಇದರಿಂದ ನಿಸ್ಸಂಶಯವಾಗಿ ನಿನಗೆ ಒಳ್ಳೆಯದಾಗುವುದು. ಕೇಳದೇ ಇದ್ದರೆ ನಿನಗೆ ಒಳ್ಳೆಯದಾಗುವುದಿಲ್ಲ. ಆದಕಾರಣವೇ ಮರುಮಾತನಾಡದೆ ಅವರಿಗೆ ವಿಧೇಯನಾಗಿರು ಎನ್ನುವುದು. ನಾನು

ನಿನಗೆ ಹೇಳುವ ಹಿತವಚನ ಇದು. ನಾವು ಎಷ್ಟೊಂದು ಕೆಲಸವನ್ನು ಮಾಡಬೇಕಾಗಿತ್ತು. ಸಾಧುಗಳಾದಮೇಲೆ ವಕೀಲರನ್ನು ನೋಡಬೇಕಾಗಿತ್ತು. ವ್ಯವಹಾರದ ತಕರಾರುಗಳು ಬರುತ್ತಿದ್ದವು. ಇಷ್ಟಾದರೂ ಕೆಲಸದಿಂದ ನಮಗೆ ಕೆಡಕಾಯಿತು ಎಂದು ಹೇಳಲಾರೆ. ಏಕೆಂದರೆ ಕೆಲಸವೆಲ್ಲ " ಅವನದು " ಎಂಬುದು ಗೊತ್ತಿತ್ತು.

ಸ್ವಾಮಿಜಿ : (ಒಂದು ಒಡೆದುಹೋದ ಬುಡ್ಡಿಯನ್ನು ನೋಡಿ). ಆ ಬುಡ್ಡಿ ಒಡೆದುಹೋಗಿದೆ. ಇದು ನಿನ್ನ ಮನಸ್ಸಿನ ದುರಭ್ಯಾಸವನ್ನು ತೋರುವುದು. ಕೆಲಸಮಾಡುವಾಗ ಯಾವುಯಾವುದೋ ಆಲೋಚನೆ ಮಾಡುತ್ತಾ ಇರುವಿ ಎಂದು ತೋರುವುದು. ಲೌಕಿಕವಾಗಲೀ, ಪಾರಮಾರ್ಥಿಕವಾಗಲಿ ಮನಸ್ಸಿನ ಸ್ಥಿಮಿತವಿಲ್ಲದೆ ಏನೂ ಲಭಿಸುವುದಿಲ್ಲ. ಒಂದು ಸಣ್ಣ ಕೆಲಸವಾಗಲಿ, ದೊಡ್ಡ ಕೆಲಸವಾಗಲಿ ಬಹಳ ಜಾಗರೂಕತೆಯಿಂದ ಮಾಡಬೇಕು. ಯಾರು ಲೌಕಿಕ ಕೆಲಸದಲ್ಲಿ ಸ್ಥಿರವಾಗಿರುವರೊ ಅವರು ಆಧ್ಯಾತ್ಮಿಕ ಸಾಧನೆಯಲ್ಲಿಯೂ ಸ್ಥಿರವಾಗಿರುವರು.

ನೀನು ಕೆಲಸವನ್ನು ಸರಿಯಾದ ದೃಷ್ಟಿಯಿಂದ ಮಾಡಬೇಕಾದರೆ ಈ ಎರಡು ವಿಷಯಗಳನ್ನೂ ಮನಸ್ಸಿನಲ್ಲಿಡಬೇಕು. ನೀನು ಯಾವ ಕೆಲಸವನ್ನು ಮಾಡುತ್ತೀಯೋ ಅದರಮೇಲೆ ಶ್ರದ್ಧೆ ಇರಬೇಕು. ಅದರಿಂದ ಬರುವ ಫಲದಮೇಲೆ ಆಸಕ್ತನಾಗಿರಬಾರದು. ಆಗಮಾತ್ರ ನೀನು ಕೆಲಸವನ್ನು ಸರಿಯಾಗಿ ಮಾಡಬಹುದು. ಇದೇ ಕರ್ಮ ರಹಸ್ಯ. ನೀನು ಮಾಡುವ ಕೆಲಸ ಭಗವಂತನ ಕೆಲಸ ಎಂಬ ಭಾವನೆಯನ್ನು ತಂದರೆ, ಆ ಕೆಲಸದಮೇಲೆ ಇರುವ ಜಿಗುಪ್ಸೆಯೆಲ್ಲ ಹೋಗುವುದು. ಇದನ್ನು ಮರೆತರೆ ಚಂಚಲವಾಗುವುದು. ಚಂಚಲಮನಸ್ಸಿನಿಂದ ಲೌಕಿಕವೂ ಇಲ್ಲ, ಪಾರಮಾರ್ಥಿಕವೂ ಇಲ್ಲ.

ಹೆಸರು ಕೀರ್ತಿಯ ಆಸೆಗೆ ಒಂದು ಮಹಾಕೆಲಸವನ್ನು ಮಾಡುವುದು ಸುಲಭ. ಆದರೆ ಅಂತಹ ಕೆಲಸದಿಂದ ಮನುಷ್ಯನ ನೈಜಗುಣವನ್ನು ತಿಳಿಯಲಾರೆ. ಅದನ್ನು ತಿಳಿದುಕೊಳ್ಳಬೇಕಾದರೆ ಅವನ ದಿನಚರಿಯನ್ನು ಗಮನಿಸಬೇಕು. ಜೀವನ ಸಾಧಾರಣ ಕೆಲಸದಲ್ಲಿ ಮನುಷ್ಯನ ಸ್ವಭಾವ ಕಾಣುವುದು. ಇಂತಹ ಗುಣಗಳಿಂದ ಮಾತ್ರ ಆತ ಎಷ್ಟುಮಟ್ಟಿಗೆ ಒಳ್ಳೆಯ ಗುಣವನ್ನು ಸಂಪಾದಿಸಿರುವನು ಎಂಬುದನ್ನು ನೋಡಬಹುದು. ನಿಜವಾದ ಕರ್ಮಯೋಗಿ ಎಂತಹ ಕೆಲಸವಾಗಲಿ ಅದು ಅತಿ ಸಣ್ಣ ಕೆಲಸವಾದರೂ ತನುಮನವನ್ನು ಅರ್ಪಿಸಿ ಮಾಡುವನು. ಅವನೆಂದಿಗೂ ಜನರ

ಹೊಗಳಿಕೆಯನ್ನು ಗಮನಿಸುವುದೇ ಇಲ್ಲ.

ನಮ್ಮ ಮನಸ್ಸಿಗೆ ಒಪ್ಪುವ ಕೆಲಸವಾದರೆ ಯಾರು ಮಾಡುವುದಿಲ್ಲ? ಕರ್ಮಯೋಗಿಗೂ, ಸಾಧಾರಣ ಮನುಷ್ಯನಿಗೂ ವ್ಯತ್ಯಾಸ ಎಲ್ಲಿರುವುದು? ತನ್ನ ಪಾಲಿಗೆ ಯಾವ ಕೆಲಸ ಬರುವುದೊ ಅದನ್ನು ಕರ್ಮಯೋಗಿ ತೆಗೆದು ಕೊಂಡು ಅದಕ್ಕೆ ಸರಿಹೊಂದಿಸಿಕೊಳ್ಳಬೇಕು. ಸುಮ್ಮನೆ ಯಾವುದೋ ಒಂದು ಕೆಲಸವನ್ನು ಮಾಡಿದರೆ ಸಾಲದು. ಅದನ್ನು ಅನಾಸಕ್ತಿಯಿಂದ ಮಾಡಬೇಕು. ದೇವರ ಹೆಸರಿನಲ್ಲಿ ಮಾಡಬೇಕು. ಕರ್ಮಯೋಗಿ ಮುಕ್ಕಾಲುಭಾಗ ಮನಸ್ಸನ್ನು ದೇವರ ಸಮೀಪದಲ್ಲಿಟ್ಟು ಉಳಿದ ಕಾಲು ಭಾಗದಿಂದ ಕೆಲಸಮಾಡಬೇಕು. ಈ ನಿಯಮವನ್ನು ಅನುಸರಿಸಿದರೆ ಮಾತ್ರ ಕೆಲಸವನ್ನು ಸರಿಯಾದ ದೃಷ್ಟಿಯಿಂದ ಮಾಡಬಹುದು. ನಿನ್ನ ಮನಸ್ಸೂ ವಿಕಾಸವಾಗುವುದು. ಆನಂದವೂ ಬರುವುದು. ದೇವರನ್ನು ಮರೆತು ಕೆಲಸಮಾಡಿದರೆ ಅಹಂಕಾರ ಸುಲಭವಾಗಿ ನಿನ್ನನ್ನು ಆಕ್ರಮಿಸು ವುದು. ಜಗಳ, ಕದನ ಇದರಿಂದ ಹುಟ್ಟುವುದು. ಮನಸ್ಸು ಚಂಚಲ ವಾಗುವುದು ಆದಕಾರಣವೆ, ನೀವು ಕೆಲಸಮಾಡಲಿ, ಬಿಡಲಿ, ದೇವರನ್ನು ಮಾತ್ರ ಮರೆಯಬೇಡಿ ಎನ್ನುವೆನು. ಇಂತಹ ದೃಷ್ಟಿ ಬರಬೇಕಾದರೆ ಸಾಧನೆ ಮಾಡಬೇಕು.

## ೨೩

## ದೇವರಮೇಲೆ ಆಸಕ್ತಿ

ಶಿಷ್ಯ: ಶ್ರೀರಾಮಕೃಷ್ಣರು ಇನ್ನೂ ಇರುವರೆ?

ಸ್ವಾಮಿಜಿ: ಏನು, ನೀನು ಹುಚ್ಚನಾಗಿರುವೆಯಾ? ಅವರು ಇಲ್ಲದೆ ಇದ್ದರೆ ನಾವು ಮನೆ, ನೆಂಟರು, ಬಂಧು, ಬಳಗ ಬಿಟ್ಟು ಇಲ್ಲಿ ಇರುತ್ತಿದ್ದೆವೆ? ಅವರು ಇರುವರು. ಹೃತ್ಪೂರ್ವಕ ಪ್ರಾರ್ಥಿಸಿ. ಅವರು ದರ್ಶನ ಕೊಡು ವರು. ನಿಮ್ಮನ್ನು ಕಾಡುತ್ತಿರುವ ಅನುಮಾನ ಭ್ರಾಂತಿಯಿಂದ ಪಾರು ಮಾಡುವರು.

ಶಿಷ್ಯ: ಸ್ವಾಮಿಜಿ, ನೀವು ಅವರನ್ನು ಈಗ ನೋಡುವಿರಾ?

ಸ್ವಾಮಿಜಿ: ಹೌದು, ಅವರೆ ಕೃಪೆದೋರಿದಾಗ. ಆಗಮಾತ್ರ ನೋಡಲು ಸಾಧ್ಯ. ಅವರ ದಯೆಯಿಂದ ಯಾರು ಬೇಕಾದರೂ ಅವರನ್ನು ನೋಡಬಹುದು. ಅಯ್ಯೋ! ಯಾರಿಗೆ ನೋಡುವುದಕ್ಕೆ ಆಸೆ ಇದೆ. ಎಷ್ಟು ಅಲ್ಪಮಂದಿಯಲ್ಲಿ ಅದು ಇರುವುದು.

ಶಿಷ್ಯ: ಸ್ವಾಮಿಜಿ! ಪರಮಹಂಸರ ವಿಷಯವಾಗಿ ಏನನ್ನಾದರೂ ಹೇಳಿ.

ಸ್ವಾಮಿಜಿ: ಮಗು, ಅದೊಂದು ಆದಿ ಅಂತ್ಯವಿಲ್ಲದ ಕಥೆ. ನಮಗೆ ಗೊತ್ತಿರುವುದು ಅಲ್ಪ. ಅವರೆ ನಿನಗೆ ಕೃಪೆತೋರಿದರೆ ಮಾತ್ರ ಅವರನ್ನು ತಿಳಿಯಬಹುದು. ಇದನ್ನು ನೆನಪಿನಲ್ಲಿಡಿ ದೇಹ, ಮನಸ್ಸು, ಆತ್ಮ ಶಕ್ತಿಯ ಕೇಂದ್ರೀಕರಣವಿಲ್ಲದೇ ಇದ್ದರೆ ಆಧ್ಯಾತ್ಮಿಕ ಜೀವನ ಸಾಧ್ಯವಿಲ್ಲ. ಮಗು, ಭಗವಂತನ ಸಾಕ್ಷಾತ್ಕಾರ ಅಷ್ಟು ಸುಲಭವಲ್ಲ.

ಶಿಷ್ಯ: ನಾನು ಧ್ಯಾನಕ್ಕೆ ಕುಳಿತಾಗ ಮನಸ್ಸು ಎಲ್ಲೆಲ್ಲೊ ಅಲೆಯುತ್ತಿರುವುದು. ಅದು ಆಲೋಚಿಸುವ ವಸ್ತುವಿಗೆ ಕೊನೆ ಮೊದಲೇ ಇಲ್ಲ. ಈ ಮನಸ್ಸಿನ ಚಂಚಲತೆಯನ್ನು ಹೇಗೆ ನಿಗ್ರಹಿಸುವುದು ?

ಸ್ವಾಮಿಜಿ. ಮೊದಲು ಹೀಗೆ ಯಾವಾಗಲೂ ಆಗುವುದು. ಆದರೆ ಮನಸ್ಸಿನ ಬಾಹ್ಯಸಂಚಾರವನ್ನು ನಿಲ್ಲಿಸಲು ಕಷ್ಟಪಟ್ಟು ಪ್ರಯತ್ನಿಸಬೇಕು. ಹೀಗೆ ಅದನ್ನು ಸಾಧಿಸಬಹುದು: ಆಸನದಮೇಲೆ ಕುಳಿತೊಡನೆಯೆ ಧ್ಯಾನಕ್ಕೆ ಪ್ರಾರಂಭಿಸಬೇಡ. ವಿಮರ್ಶೆಮಾಡಿ ನಿನ್ನ ಮನಸ್ಸನ್ನು ಹಿಂದಕ್ಕೆ ಸೆಳೆದು ಇಷ್ಟದೇವರ ಪಾದದಡಿಯಲ್ಲಿ ಕಟ್ಟಿಹಾಕು. ನಂತರ ಜಪ, ಧ್ಯಾನ ಮಾಡು. ನೀನು ಕೆಲವುದಿನ ಹೀಗೆ ಮಾಡಿದರೆ ಮನಸ್ಸು ಕ್ರಮೇಣ ಸ್ಥಿಮಿತಕ್ಕೆ ಬರುವುದು.

ಈ ಕಲಿಯುಗದಲ್ಲಿ ಸುಲಭಮಾರ್ಗವೇ ಜಪಮಾರ್ಗ. ಯಾವಾಗಲೂ ಜಪಮಾಡುವುದರಿಂದ ಮನಸ್ಸು ಶಾಂತವಾಗಿ ಏಕಾಗ್ರವಾಗುವುದು. ಕೊನೆಗೆ ಇಷ್ಟದೇವತೆಯಲ್ಲಿ ತಲ್ಲೀನವಾಗುವುದು. ಯೋಗ ಮುಂತಾದ ಮಾರ್ಗವೆಲ್ಲ ದೇವರೆಡೆಗೆ ನಮ್ಮನ್ನು ಕರೆದೊಯ್ಯುವುದು. ಆದರೆ ಬಹಳ ಕಷ್ಟ. ಜಪವನ್ನು ಪದೇಪದೇ ಮಾಡಿ ಜೊತೆಗೆ ಇಷ್ಟದೇವತೆಯನ್ನು ಧ್ಯಾನಮಾಡಿ. ಇದರಿಂದ ಜಪ ಧ್ಯಾನ ಎರಡೂ ಆಗುವುದು. ಇದರಿಂದ ಜಯ ಬೇಗ ಲಭಿಸುವುದು.

ಒಂದುದಿನವೂ ಬಿಡದೆ ಯಾವಾಗಲೂ ಸ್ಥಿರವಾಗಿ ಸಾಧನೆ ಮಾಡು. ನಿನಗೆ ಇಚ್ಛೆ ಇರಲಿ, ಇಲ್ಲದೆ ಇರಲಿ ಆ ಸಮಯದಲ್ಲಿ ಮಾಡಿದರೆ ಭಗವಂತನಮೇಲೆ ಭಕ್ತಿ ಮತ್ತು ಆಸಕ್ತಿ ನಿನ್ನಲ್ಲಿ ಹುಟ್ಟುವುದು. ಅವನ ಹತ್ತಿರ ಹೋದಂತೆ ನಿನಗೇ ಗೊತ್ತಾಗುವುದು. ಅವನನ್ನು ಮಾತ್ರ ನೆನೆಯಬೇಕೆಂಬ ಆಲೋಚನೆ ನಿನ್ನಲ್ಲಿ ಏಳುವುದು. ಬೇರೆಕಡೆಗೆ ಮನಸ್ಸನ್ನು ತಿರುಗಿಸಲು ಆಗುವುದಿಲ್ಲ. ಈ ಸಮಯದಲ್ಲೇ ಸಾಧಕನಿಗೆ ಹೃದಯದಲ್ಲಿ ಆನಂದದ ಅರಿವಾಗುವುದು.

ದೇವರಮೇಲೆ ತೀವ್ರ ಭಕ್ತಿ ಮತ್ತು ಆಸಕ್ತಿ ಇಲ್ಲದೇಇದ್ದರೆ ನಿರ್ಜನ

ಪ್ರದೇಶಕ್ಕೆ ಹೋದರೂ ಸರಿಯಾದ ದಾರಿಯಲ್ಲಿ ಸಾಧನೆಮಾಡುವುದು ಪ್ರಾರಂಭಿಕರಿಗೆ ಬಹಳ ಕಷ್ಟ. ನಿರ್ಜನಪ್ರದೇಶದಲ್ಲಿದ್ದರೆ ಕೇಡಾಗುವ ಸಂಭವವೂ ಇದೆ. ಒಂದೇ ಸ್ವಭಾವದ ಇಬ್ಬರು ಒಟ್ಟಿಗೆ ಇರುವುದು ಮೇಲು. ಯಾರಿಗಾದರೂ ಸ್ವಲ್ಪ ತೊಂದರೆಯಾದರೆ ಮತ್ತೊಬ್ಬರು ಅವರಿಗೆ ಸಹಾಯಮಾಡಬಹುದು. ಇಬ್ಬರಿಗಿಂತ ಜಾಸ್ತಿ ಇದ್ದರೆ ಹರಟೆ ಮುಂತಾದುವು ಶುರುವಾಗುವುದು. ಪ್ರಾಪಂಚಿಕ ಹರಟೆಗಿಂತ ಆಧ್ಯಾತ್ಮಿಕ ಜೀವನಕ್ಕೆ ಹಾನಿಕರವಾದುದು ಮತ್ತೊಂದು ಇಲ್ಲ. ಇಂತಹ ಮಾತಿನಿಂದ ಮನಸ್ಸು ತನ್ನ ಭವ್ಯ ಆದರ್ಶವನ್ನು ಕಳೆದುಕೊಳ್ಳುವುದು. ಮಾನವ ಜೀವನದ ಚರಮಗುರಿಯಾದ ಭಗವಂತನನ್ನು ಮರೆಯುವುದು.

ಸಾಧನೆಮಾಡುವಾಗ ಛತ್ರದಿಂದ ಆಹಾರವನ್ನು ಬೇಡುವುದು ಒಳ್ಳೆಯದಲ್ಲ. ಪ್ರಾಪಂಚಿಕರು ಶ್ರಾದ್ಧಾಕಾಲದಲ್ಲಿ ಸಾಧುಸೇವೆಗೆಂದು ಈ ಹಣವನ್ನು ಕೊಟ್ಟಿರುವರು. ಇನ್ನೂ ಹಲವಾರು ಆಸೆಯ ಪಾಶಕ್ಕೆ ಸಿಕ್ಕಿ ಇಂತಹ ಸಂಸ್ಥೆಗೆ ಜನರು ಸಹಾಯಮಾಡುವರು. ಆದುದರಿಂದಲೇ ಇಂತಹ ಸಂಸ್ಥೆಗಳು ಕೊಡುವ ಆಹಾರ ಶುದ್ಧವಲ್ಲ. ಮಧುಕರಿಯಿಂದ ಜೀವಿಸು ವುದು ಒಳ್ಳೆಯದು. ಇದು ಪರಿಶುದ್ಧವಾದುದು. ಯಾವ ಆಸೆಯ ಸೋಂಕು ಇದಕ್ಕೆ ಇರುವುದಿಲ್ಲ.

ಸಾಧನೆ ಮಾಡುವಾಗ ಆಹಾರವನ್ನು ಕಡಿಮೆ ಮಾಡಬೇಕು. ಹೊಟ್ಟೆ ತುಂಬಿದಾಗ ಜಪ, ಅಥವಾ ಧ್ಯಾನ ಸಾಧ್ಯವಿಲ್ಲ. ಹೆಚ್ಚು ಶಕ್ತಿ ಜೀರ್ಣಕೋಶದ ಕಡೆಗೆ ಹೋಗುವುದು. ಮನಸ್ಸು ಚಂಚಲವಾಗುವುದು. ಶ್ರೀಕೃಷ್ಣ ಗೀತೆಯಲ್ಲಿ, ಯಾರು ಹೆಚ್ಚು ತಿನ್ನುವರೊ ಅಥವಾ ಕಡಿಮೆ ತಿನ್ನುವರೊ, ಯಾರು ಅರೆನಿದ್ದೆ ಮಾಡುವರೊ ಅಥವಾ ಕಡಿಮೆ ನಿದ್ದೆ ಮಾಡುವರೊ, ಅವರಿಗೆ ಯೋಗ ಸಾಧ್ಯವಿಲ್ಲವೆಂದು ಹೇಳುವನು. ಆಹಾರ, ವಿಹಾರ ಕರ್ಮ ಯುಕ್ತವಾಗಿರಬೇಕು.

ಆಧ್ಯಾತ್ಮಿಕ ಸಾಕ್ಷಾತ್ಕಾರ ಬೇಕಾದರೆ ಯಾವುದಾದರೂ ಒಂದು ಸ್ಥಳದಲ್ಲಿ ನೆಲಸಿ ಬಿಡದೆ ಕೆಲವುಕಾಲ ಸಾಧನೆಮಾಡಬೇಕು. ಸುಮ್ಮನೆ ಅಲೆದಾಡಿದರೆ ಸ್ಥಿರವಾದ ಪ್ರಯೋಜನವೇನೂ ಆಗುವುದಿಲ್ಲ. ನನ್ನ ಸ್ವಂತ ಜೀವನದ ಅನುಭವದಿಂದ ನಾನು ನಿಮಗೆ ಹೇಳುತ್ತಿರುವೆನು. ನನ್ನ ಅನುಭವದಿಂದ ನೀವು ಬುದ್ಧಿಯನ್ನು ಕಲಿಯುವಿರೊ ಇಲ್ಲವೊ ಗೊತ್ತಿಲ್ಲ.

ಸ್ವಾಮಿವಿವೇಕಾನಂದರ ಪವಿತ್ರಮಠದಲ್ಲಿ ಸಾಧನೆಗೆ ಎಷ್ಟು ಅನು ಕೂಲವಿದೆ. ಆಹಾರ, ಬಟ್ಟೆಗೆ ನೀವು ಆಲೋಚಿಸಬೇಕಾಗಿಲ್ಲ. ಎಲ್ಲಾ

ದೊರಕುವುದು. ಇಲ್ಲಿ ಏತಕ್ಕೆ ನಿಂತು ಹೃತ್ಪೂರ್ವಕ ಪ್ರಾರ್ಥನೆ ಧ್ಯಾನದಲ್ಲಿ ಕಾಲ ಕಳೆಯಬಾರದು. ಆದರೆ ಯಾರು ನಮ್ಮ ಮಾತನ್ನು ಕೇಳುತ್ತಾರೆ? ಮಗು, ಸುಮ್ಮನೆ ಅಲೆದಾಡಿದರೆ ಪ್ರಯೋಜನವಿಲ್ಲ.

ಕೆಲವು ದಿನ ಇಲ್ಲಿ ಸಾಧನೆಮಾಡಿದರೆ ಮಹಾತ್ಮನಾಗುತ್ತೇನೆ ಎಂದು ಭಾವಿಸಿದ್ದರೆ ಅದು ತಪ್ಪು. ಹೀಗೆ ನೀನು ಮಹಾತ್ಮನಾಗಲಾರೆ. ಸತತ ಅಭ್ಯಾಸವಿಲ್ಲದೆ ಆಧ್ಯಾತ್ಮಿಕ ಅನುಭವ ದೊರಕಲಾರದು. ಬರಿ ಉಪಾಯ ದಿಂದ ಅದು ದೊರಕುವುದಿಲ್ಲ. ಭಗವದ್ದರ್ಶನವನ್ನು ಪಡೆಯಬೇಕೆಂಬ ಆಕಾಂಕ್ಷೆ ನಿನ್ನಲ್ಲಿ ತೀವ್ರವಾಗಿದ್ದರೆ ಸಾಧನೆಯಲ್ಲಿ ಸಂಪೂರ್ಣ ತನ್ಮಯ ನಾಗಬೇಕು. ಸಾಧನೆಯಿಲ್ಲದೆ ಸುಮ್ಮನೆ ಕಾವಿಯುಟ್ಟು ಭಿಕ್ಷೆ ಬೇಡು ತ್ತಿದ್ದರೆ ಬಂದ ಪ್ರಯೋಜನವೇನು ?'

೨೮

## ಸಾಧು ಕರ್ತವ್ಯ

ಶಿಷ್ಯ : ಸ್ವಾಮಿಜಿ, ಹಲವು ವಿಧದಲ್ಲಿ ಇಂದ್ರಿಯನಿಗ್ರಹಮಾಡಲು ನಾನು ಯತ್ನಿಸುತ್ತಿರುವೆನು. ಆದರೂ ಫಲಕಾರಿಯಾಗಲಿಲ್ಲ. ನಾನು ಹೇಗೆ ಜಯಿಸಲು ಸಾಧ್ಯ. ದಯವಿಟ್ಟು ಹೇಳುತ್ತೀರಾ?

ಸ್ವಾಮಿಜಿ: ನಾನು ಕಾಮ ಗೆಲ್ಲುತ್ತೇನೆ, ಕ್ರೋಧ ಗೆಲ್ಲುತ್ತೇನೆ, ಲೋಭ ಗೆಲ್ಲುತ್ತೇನೆ ಎಂದು ಯತ್ನಿಸಿದರೆ ಫಲಕಾರಿಯಾಗಲಾರದು. ನಿನ್ನ ಮನಸ್ಸನ್ನು ದೇವರಮೇಲೆ ನಿಲ್ಲಿಸಿದರೆ ಮಾತ್ರ, ಕ್ರಮೇಣ, ನಿನ್ನ ಪ್ರಯತ್ನ ವಿಲ್ಲದೇ ಅವೇ ದುರ್ಬಲವಾಗುವುವು. ನೀನು ಹೆಚ್ಚು ಪೂರ್ವಕ್ಕೆ ಹೋದಷ್ಟೂ ಪಶ್ಚಿಮದಿಂದ ದೂರವಾಗುವೆ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಇದನ್ನು ಸಾಧಿಸುವುದಕ್ಕೆ ನೀನು ಶಕ್ತಿಯನ್ನೇನು ವ್ಯಯ ಮಾಡಬೇಕಾದ್ದಿಲ್ಲ. ಈ ನೇರವಾದ ಮಾರ್ಗವನ್ನನುಸರಿಸು. ದೇವರನ್ನು ಸ್ಮರಿಸಿ ಪ್ರಾರ್ಥಿಸಿ. ಆಗ ಇಂದ್ರಿಯಗಳು ತಮ್ಮ ವಿಷದ ಕೊಂಡಿಯನ್ನು ತಾವೇ ಕಳೆದುಕೊಳ್ಳುವುವು.

ನೀನು ಮಾಡುತ್ತಿರುವ ಜಪ, ಧ್ಯಾನ ಬರಿಯತೋರಿಕೆಯದು. ದಿನಕ್ಕೆ ಒಂದು ಗಂಟೆಯೊ, ಎರಡು ಗಂಟೆಯೊ ಕಾಟಾಚಾರದ ಸಾಧನೆ ಯಿಂದ ನೀನು ದೇವರನ್ನು ಪಡೆಯಲಾರೆ. ಹಗಲು ರಾತ್ರಿ ಭಗವಂತನ ಧ್ಯಾನ, ಅವನ ಪಾವನನಾಮ ಮತ್ತು ಮಹಿಮೆಯ ಮನನದಲ್ಲಿ ಕಳೆದರೆ ಮಾತ್ರ ಅವನ ದರ್ಶನ ಸಾಧ್ಯ. ಇಲ್ಲದೇ ಇದ್ದರೆ ಇಲ್ಲ. ಇದೊಂದೇ ದಾರಿ. ಅದಕ್ಕೇ ಸಾಧನೆಯಲ್ಲಿ ತನ್ಮಯನಾಗು; ಕಾಲಹರಣ

ಮಾಡಬೇಡ.

ಸಾಧನೆಯ ಪ್ರಾರಂಭದಲ್ಲಿ ಕ್ರಮೇಣ ಜಪ, ಮತ್ತು ಧ್ಯಾನವನ್ನು ಹೆಚ್ಚಿಸುತ್ತ ಹೋಗಬೇಕು. ಈವತ್ತು ಒಂದು ಗಂಟೆ ಕಳೆದರೆ ಇನ್ನು ಕೆಲವು ದಿನಗಳಾದಮೇಲೆ ಇನ್ನೂ ಸ್ವಲ್ಪ ಹೆಚ್ಚು ಹೊತ್ತು, ಅದಾದಮೇಲೆ ಮತ್ತೂ ಸ್ವಲ್ಪ ಹೆಚ್ಚುಹೊತ್ತು ಹೀಗೆ ಪ್ರತಿದಿನ ಹೆಚ್ಚಿಸುತ್ತಾ ಹೋಗಬೇಕು. ಕೇವಲ ತಾತ್ಕಾಲಿಕ ಸ್ಫೂರ್ತಿಯಿಂದ ಇದ್ದಕ್ಕಿದ್ದಂತೆಯೆ ಅದನ್ನು ಹೆಚ್ಚು ಮಾಡಕೂಡದು. ಈ ನಿಯಮವನ್ನು ಮೀರಿದರೆ ಕಷ್ಟಕ್ಕೆ ಗುರಿಯಾಗುವೆ ಎಂದು ಎಚ್ಚರಿಸುತ್ತೇನೆ. ತಕ್ಷಣ ಹೆಚ್ಚುಮಾಡುವುದರಿಂದ ಆಗುವ ಪ್ರತಿಕ್ರಿಯೆಯನ್ನು ಸಹಿಸುವುದು ಕಷ್ಟ. ಹೆಚ್ಚು ಮಾನಸಿಕ ನಿರಾಶೆಯನ್ನು ಅನುಭವಿಸಬೇಕಾಗುವುದು. ನಂತರ ಜಪ ಅಥವಾ ಧ್ಯಾನ ಮಾಡುವುದಕ್ಕೆ ಮನಸ್ಸೇ ಇರುವುದಿಲ್ಲ. ನಿರಾಶೆಯ ಕೂಪದಲ್ಲಿ ಬಿದ್ದ ಮನಸ್ಸನ್ನು ಎಚ್ಚರಿಸಿ ಪುನಃ ಸಾಧನಾಭಿಮುಖವಾಗಿ ಮಾಡುವುದು ಬಹಳ ಕಷ್ಟ.

ಎಲ್ಲಾ ಸಾಧನೆಯಲ್ಲೂ ಭಗವಂತನ ಕೃಪೆ ಅತಿಮುಖ್ಯ. ಅದಿಲ್ಲದೆ ನಾವು ಮುಂದುವರಿಯುವುದಕ್ಕೇ ಆಗುವುದಿಲ್ಲ. ಅವನ ದಯೆಯನ್ನು ಸಂಪಾದಿಸುವುದಕ್ಕೆ ಹೃತ್ಪೂರ್ವಕ ಪ್ರಯತ್ನಪಡಬೇಕು. ಪ್ರಾರ್ಥನೆ ಅದ್ಭುತ ಪರಿಣಾಮಕಾರಿ. ಅದು ದೇವರಿಗೂ ಇಷ್ಟ.

ಸಾಧನೆಯ ಪ್ರಾರಂಭದಲ್ಲಿ ಯಾವ ಪ್ರಾಪಂಚಿಕ ಭೋಗಾಸಕ್ತಿಯ ಕಡೆಗೂ ಮನಸ್ಸು ವಾಲಕೂಡದು. ಜಿತೇಂದ್ರಿಯನಾಗುವುದಕ್ಕೆ, ಆಸೆಯನ್ನೆಲ್ಲಾ ಜಯಿಸುವುದಕ್ಕೆ, ಇದೇ ಸಕಾಲ. ಭಗವಂತನ ದಯೆಯಿಂದ ನೀನು ಈ ಅಭ್ಯಾಸದಲ್ಲಿ ಒಂದುಸಲ ಸ್ಥಿರನಾದರೆ ಆಸೆ ಪುನಃ ನಿನ್ನ ಮನಸ್ಸಿನಲ್ಲಿ ಎದ್ದರೂ ಅದರಿಂದ ಕಳಂಕಿತನಾಗುವ ಅಂಜಿಕೆ ಇಲ್ಲ.

ತನ್ನ ಮನೆ, ಬಂಧುಬಳಗ ಎಲ್ಲರನ್ನೂ ತೊರೆದು ಸನ್ಯಾಸಾಶ್ರಮವನ್ನು ಸ್ವೀಕರಿಸಿದಮೇಲೆ, ಅಧಿಕಾರವನ್ನು ಮತ್ತೊಬ್ಬರಮೇಲೆ ಚಲಾಯಿಸುವುದು ಅಯೋಗ್ಯ. ಸನ್ಯಾಸಿ ಪುನಃ ಬಂಧನಕ್ಕೆ ಬೀಳುವುದೇ ಇದರಿಂದ. ಈ ಪತನವನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟಿರು. ನೀನು ಯಾವುದನ್ನು ಮಾಡಿದರೂ, ನೋಡಿದರೂ ಎಲ್ಲಾ ಭಗವಂತನಿಗೇ ಸೇರಿದುದು, ನೀನು ಆತನ ಕೈಯಲ್ಲಿರುವ ಯಂತ್ರ ಎಂದು ಭಾವಿಸು. "ಮೋಹದಿಂದ ಪ್ರೇರೇಪಿತರಾಗಿ ಮನುಜರು ನಾವು ಇದನ್ನು ನೋಡುತ್ತಿರುವೆವು ಎಂದು ಭಾವಿಸುವರು" ಎಂಬ ಗೀತೆಯ ಸಂದೇಶವನ್ನು ಜ್ಞಾಪಕದಲ್ಲಿಡು.

ಸುಳ್ಳು ಹೇಳುವುದು ಮತ್ತೊಂದು ಮಹಾಪಾತಕ. ಕುಡುಕನನ್ನಾದರೂ ನೆಚ್ಚಬಹುದು, ಪರಸ್ತ್ರೀವ್ಯಾಮೋಹಿಯನ್ನಾದರೂ ನೆಚ್ಚಬಹುದು. ಆದರೆ ಸುಳ್ಳು ಹೇಳುವವನನ್ನು ನೆಚ್ಚಲಾಗುವುದಿಲ್ಲ. ಪ್ರಪಂಚದ ಪಾತಕಗಳಲ್ಲೆಲ್ಲಾ ಮಹಾಪಾತಕ ಇದು.

ಮತ್ತೊಬ್ಬರಲ್ಲಿ ಎಂದಿಗೂ ನೀನು ತಪ್ಪು ಕಂಡುಹಿಡಿಯಬಾರದು. ಇದು ಒಬ್ಬನ ಶ್ರೇಯಸ್ಸಿಗೆ ವಿನಾಶಕಾರಿ. ಹಗಲುರಾತ್ರೆ ಮತ್ತೊಬ್ಬರಲ್ಲಿರುವ ಕೆಟ್ಟಗುಣವನ್ನು ಆಲೋಚನೆಮಾಡುತ್ತಿದ್ದರೆ ಅವು ನಿನ್ನ ಮನಸ್ಸಿನಮೇಲೆ ಪರಿಣಾಮವನ್ನುಂಟುಮಾಡುವುವು. ನಿನ್ನಲ್ಲಿರುವ ಒಳ್ಳೆಯ ಗುಣಗಳೂ ಮಾಯವಾಗುವುವು. ಮತ್ತೊಬ್ಬರನ್ನು ದೂರಿ ಪ್ರಯೋಜನವಿಲ್ಲ. ಭಗವಂತನ ಮಹಾತ್ಮೆಯನ್ನು ಹಾಡುತ್ತ ಎಲ್ಲರೊಂದಿಗೂ ಬೆರೆ. ಆದರೆ ಈ ಬುದ್ಧಿವಾದವನ್ನು ಕೇಳುವವರು ಯಾರು? ಗುಂಪಾಗಿ ಕುಳಿತು ಮತ್ತೊಬ್ಬರಲ್ಲಿ ತಪ್ಪು ಕಂಡುಹಿಡಿದು ಅವರನ್ನು ದೂರುವುದು ಸಾಧುಗಳಿಗೆ ಕೆಟ್ಟದ್ದು. ಅತಿಹೀನ ಮನಸ್ಸಿನವರಲ್ಲದೆ ಉಳಿದವರಾರೂ ಇಂತಹ ತುಚ್ಛಕೆಲಸದಲ್ಲಿ ಭಾಗಿಗಳಾಗುವುದಿಲ್ಲ.

ಯಾವಾಗಲೂ ಮತ್ತೊಬ್ಬರಲ್ಲಿ ಅತಿಸ್ವಲ್ಪ ಗುಣವಿದ್ದರೂ ಅದನ್ನು ಮಾತ್ರ ನೋಡಿ ಹೊಗಳಿ. ಗೌರವಿಸುವುದನ್ನು ಅಭ್ಯಾಸಮಾಡು. ಮಗು, ಇದನ್ನು ನೆನಪಿನಲ್ಲಿಡು; ಮತ್ತೊಬ್ಬರಲ್ಲಿರುವ ಗುಣಕ್ಕೆ ಗೌರವ ಕೊಡದೇ ಇದ್ದರೆ ನಿನ್ನ ಮನಸ್ಸು ವಿಕಾಸವಾಗುವುದಿಲ್ಲ; ಉಳಿದವರಾರೂ ನಿನ್ನನ್ನು ಒಳ್ಳೆಯವನೆಂದು ಕರೆಯುವುದಿಲ್ಲ.

ಗೃಹಸ್ಥನ ದಾನವನ್ನು ಸಾಧನೆಯಿಲ್ಲದೆ ಸ್ವೀಕರಿಸುವುದು ಸಾಧುವಿಗೆ ಯೋಗ್ಯವಲ್ಲ. ಗೃಹಸ್ಥ ಸನ್ಯಾಸಿಯ ಹೊಟ್ಟೆಗೆ ಬಟ್ಟೆಗೆ ಕೊಡುತ್ತಾನೆ. ಏಕೆಂದರೆ, ಸನ್ಯಾಸಿ ಎಲ್ಲವನ್ನೂ ಬಿಟ್ಟು ದೇವರನ್ನೇ ಚಿಂತಿಸುತ್ತಾನೆ ಎಂದು. ಸಾಧನೆ ಇಲ್ಲದೆ ಗೃಹಸ್ಥನ ಸೇವೆಯನ್ನು ಸ್ವೀಕರಿಸಬಾರದು. ಈ ನಿಯಮವನ್ನು ಮೀರಿದರೆ ಇದರಿಂದ ನಿನಗೇ ಕೇಡು. ಗೃಹಸ್ಥರಿಂದ ನಾವು ಏನನ್ನು ಸ್ವೀಕರಿಸಿದರೂ ನಮ್ಮ ಪುಣ್ಯಕ್ಕೆ ಅವರು ಭಾಗಿಗಳು. ಸಾಧು ಇವರಿಗೆಲ್ಲಾ ಕೊಟ್ಟು ಏನಾದರೂ ಉಳಿಯುವಷ್ಟು ಪುಣ್ಯವನ್ನು ಸಂಪಾದಿಸಬೇಕು.

ಮನುಷ್ಯನಲ್ಲಿ ಒಳ್ಳೆಯ ಮತ್ತು ಕೆಟ್ಟ ಸ್ವಭಾವಗಳೆರಡೂ ಇದೆ. ನಿನ್ನ ಕಣ್ಣಿಗೆ ಕೇವಲ ಕೆಟ್ಟಗುಣ ಮಾತ್ರ ಕಾಣಿಸುತ್ತಿದ್ದರೆ ಅವರನ್ನು ದೂರಬೇಡ. ಅವನು ಕೇವಲ ನಿನ್ನವನು ಎಂದು ಭಾವಿಸಿ ಅವನನ್ನು ತಿದ್ದು

ವುದಕ್ಕೆ ಪ್ರಯತ್ನಿಸು. ಪ್ರೀತಿಯಿಂದ ಅವನನ್ನು ಶ್ರೇಯಸ್ಸಿನ ಕಡೆಗೆ ತಿರುಗಿಸು. ಆಗ ಮಾತ್ರ ನಿನ್ನನ್ನು ಮನುಷ್ಯನೆಂದು ಕರೆಯಬಹುದು. ಮತ್ತೊಬ್ಬನನ್ನು ದೂರಿಬಂದ ಪ್ರಯೋಜನವೇನು ?

ಶಿಷ್ಯ : ಸ್ವಾಮಿಜಿ, ಕೆಲವುದಿನ ಧ್ಯಾನಸಮಯದಲ್ಲಿ ಮನಸ್ಸು ತನಗೆ ತಾನೆ ಶಾಂತವಾಗಿ ಸ್ಥಿರವಾಗುವುದು. ಮತ್ತೆ ಕೆಲವುದಿನ ನಾನೆಷ್ಟೇ ಪ್ರಯತ್ನಪಟ್ಟರೂ ಅದು ಸಾಧ್ಯವೇ ಆಗುವುದಿಲ್ಲ. ಆಗ ಮನಸ್ಸನ್ನು ಹೇಗೆ ಸ್ಥಿರಗೊಳಿಸುವುದು ?

ಸ್ವಾಮಿಜಿ . ಗಂಗಾನದಿಯಲ್ಲಿ ಏರಿಳಿತಗಳು ಹೇಗಿದೆಯೊ ಹಾಗೆಯೆ ಪ್ರಪಂಚದಲ್ಲಿ ಎಲ್ಲಾ ಸಾಧನೆಯಲ್ಲೂ ಏರಿಳಿತಗಳಿವೆ. ಮೊದಮೊದಲು ಇದಕ್ಕೆ ನಾವು ಆಶ್ಚರ್ಯಪಡಬೇಕಾಗಿಲ್ಲ. ಸಾಧನೆಯನ್ನು ಬಿಡಬೇಡ. ಹೀಗೆಯೆ ನೀನು ಕೆಲವುಕಾಲ ಮುಂದುವರಿದರೆ ಮನಸ್ಸಿನ ಏರಿಳಿತಗಳು ನಿಂತು ಮನಸ್ಸು ಅವಿರಳಪ್ರವಾಹದಂತೆ ದೇವರ ಕಡೆಗೆ ಹರಿಯುವುದು.

ಯಾವಾಗ ಮನಸ್ಸು ಶಾಂತವಾಗಿ ಸ್ಥಿರವಾಗಿದೆ ಎಂದು ಗೊತ್ತಾಗುವುದೊ ಆಗ ಕೆಲಸವನ್ನೆಲ್ಲ ಬಿಟ್ಟು ಸಾಧನೆಯಲ್ಲಿ ನಿರತನಾಗು ; ಮತ್ತು ಯಾವಾಗ ಚಿತ್ತ ಚಂಚಲವಾಗಿರುವುದೊ ಆಗಲೂ ಕೂಡ ನಿತ್ಯಸಾಧನೆಗೆ ಕುಳಿತು ವಿವೇಕದಿಂದ ಮನಸ್ಸನ್ನು ನಿಗ್ರಹಿಸಲು ಯತ್ನಿಸು. ಮನಸ್ಸು ತಕ್ಷಣ ಸ್ಥಿರವಾಗಲಾರದು. ಪ್ರತಿಕ್ಷಣವೂ ನೀನು ಹೋರಾಡಬೇಕು. ಹೋರಾಟದಿಂದ ಮನಸ್ಸು, ಬುದ್ಧಿ, ಇಂದ್ರಿಯಗಳೆಲ್ಲ ಕ್ರಮೇಣ ಸ್ವಾಧೀನಕ್ಕೆ ಬರುವುವು.

ಮಗು, ಇದನ್ನು ನೆನಪಿನಲ್ಲಿಡು. ನೀನು ಸಾಧುವಾಗಿರುವುದರಿಂದ ಶಾಂತನಾಗಿರಬೇಕು, ಮೃದುವಾಗಿರಬೇಕು, ನಿಗರ್ವಿಯಾಗಿರಬೇಕು, ನ್ಯಾಯಪರನಾಗಿರಬೇಕು. ನಿನ್ನ ಪ್ರತಿಯೊಂದು ನಡೆನುಡಿಯಲ್ಲಿ, ಮಾತಿನಲ್ಲಿ ಒಳ್ಳೆಯತನ ಪ್ರಕಾಶಿಸುತ್ತಿರಬೇಕು. ಉಳಿದವರ ಮನಸ್ಸಿಗೆ ನಿನ್ನ ಸಂಗದಿಂದ ಶಾಂತಿ ಬರಬೇಕು. ಒಳ್ಳೆಯದು ಮತ್ತು ಭಗವಂತನ ಕಡೆಗೆ ಆಕರ್ಷಿತವಾಗಬೇಕು.

ಶಿಷ್ಯ : ಸ್ವಾಮಿಜಿ, ತೀರ್ಥಸ್ಥಳಗಳಲ್ಲಿ ಆಧ್ಯಾತ್ಮಿಕತರಂಗವಿದೆ ಎಂದು ಕೇಳುತ್ತೇನೆ. ಹೀಗೆಂದರೆ ಅರ್ಥವೇನು ?

ಸ್ವಾಮಿಜಿ : ಪ್ರತಿಯೊಂದು ತೀರ್ಥಸ್ಥಳದಲ್ಲಿಯೂ ಆಧ್ಯಾತ್ಮಿಕ ತರಂಗ ಹರಿಯುವ ಒಂದು ಕಾಲವಿದೆ. ಅಂತಹ ಕಾಲದಲ್ಲಿ ಮನಸ್ಸನ್ನು ಸುಲಭವಾಗಿ ಜಪ, ಧ್ಯಾನದ ಸಹಾಯದಿಂದ ಶಾಂತಿಗೆ ತರಬಹುದು.

ಹೃದಯದಲ್ಲಿ ಒಂದು ಅವರ್ಣನೀಯ ಆನಂದ ಏಳುವುದು.

ಶಿಷ್ಯ : ಅಂತಹ ಕಾಲವನ್ನು ಹೇಗೆ ತಿಳಿಯುವುದು ?

ಸ್ವಾಮಿಜಿ : ಅದನ್ನು ತಿಳಿದುಕೊಳ್ಳುವುದೇನೂ ಕಷ್ಟವಲ್ಲ. ಶ್ರದ್ಧಾವಂತ ಕೆಲವು ದಿನ ಸಾಧನೆ ಮಾಡಿದಮೇಲೆ ಇದನ್ನು ಸುಲಭವಾಗಿ ತಿಳಿಯಬಹುದು.

ಕಾಶಿ ಪ್ರಪಂಚದಲ್ಲಿರುವ ಸ್ಥಳಗಳಲ್ಲೆಲ್ಲಾ ಪವಿತ್ರತಮವಾದುದು. ಇದು ಅದ್ಭುತ ಆಧ್ಯಾತ್ಮಿಕ ಭಾವನೆಯ ಕೇಂದ್ರ. ನೀನು ಇಲ್ಲಿ ಏನು ಸಾಧನೆಮಾಡಿದರೂ ಹತ್ತರಷ್ಟು ಫಲಿಸುವುದು. ಈ ಪವಿತ್ರ ಸ್ಥಳದಲ್ಲಿ ಮಂತ್ರದಲ್ಲಿ ಸುಪ್ತವಾಗಿರುವ ಮಹಾಶಕ್ತಿ ಬೇಗ ಜಾಗ್ರತವಾಗುವುದು ನಿತ್ಯಮುಕ್ತಸ್ಥಳವಾದ ಕಾಶಿಯಲ್ಲಿ ವಿಶ್ವನಾಥ ಕೇಳದೆ ದೊಡ್ಡವರು, ಚಿಕ್ಕವರು, ದರಿದ್ರ, ಧನಿಕರು, ಪಾಪಿಯರೆಗಳೆಲ್ಲರೂ ಮುಕ್ತಿಯನ್ನು ಕರುಣಿಸುವನು. ಈ ಧನ್ಯತಮ ತೀರ್ಥಕ್ಷೇತ್ರದಲ್ಲಿ ನಿಷ್ಕಳಂಕ ಜೀವನವನ್ನು ನಡೆಸಬಲ್ಲವನು ಮಾನವೋತ್ತಮ.

೨೯

## ಭಗವನ್ನಾಮ

ಸ್ವಾಮಿಜಿ : ಈಗ ನೀನು ಪ್ರಾರ್ಥನೆ, ಧ್ಯಾನ ಮಾಡುತ್ತಿರುವೆಯಾ?

ಭಕ್ತ : ಇಲ್ಲ, ಸ್ವಾಮಿಜಿ.

ಸ್ವಾಮಿಜಿ : ಪ್ರತಿದಿನ ಸ್ವಲ್ಪ ಮಾಡುವುದು ಒಳ್ಳೆಯದು. ಇದರಿಂದ ಮನಸ್ಸು ಸ್ಥಿಮಿತವಾಗಿ ಶಾಂತಿ ಬರುವುದು. ನಿನಗೆ ಕುಲಗುರುಗಳು ಇರಬಹುದು. ನೀನು ಏತಕ್ಕೆ ಅವರಿಂದ ಉಪದೇಶ ತೆಗೆದುಕೊಂಡಿಲ್ಲ. ಅವರಿಂದ ಬೇಗ ಉಪದೇಶ ಪಡೆ. ಪ್ರತಿದಿನ ಸ್ವಲ್ಪ ಧ್ಯಾನ ಮತ್ತು ಜಪ ಮಾಡಬೇಕು. ರುದ್ರಾಕ್ಷಿಮಾಲೆ ತೆಗೆದುಕೊಂಡು ಅದನ್ನು ಗಂಗಾನೀರಿನಲ್ಲಿ ಅದ್ದಿ, ವಿಶ್ವೇಶ್ವರ ಲಿಂಗಕ್ಕೆ ಸ್ಪರ್ಶಿಸಿ, ದಿನಕ್ಕೆ ನೂರಎಂಟೂ, ಸಾವಿರವೊ ಜಪ ಮಾಡು. ಹೆಚ್ಚುಮಾಡಬೇಕೆಂದು ಇಚ್ಛೆಯಾದರೆ ಹಾಗೆ ಮಾಡಿದರೆ ಏನೂ ತೊಂದರೆಯಿಲ್ಲ. ನೀನು ಅದನ್ನು ಮಾಡಬೇಕು.

ಭಕ್ತ : ನಾನು ಏನೆಂದು ಉಚ್ಚರಿಸಲಿ ?

ಸ್ವಾಮಿಜಿ : ಭಗವಂತನ ಮಂಗಳನಾಮವನ್ನು. ಅವನಿಗೆ ಇರುವ ಹಲವಾರು ನಾಮುಗಳಲ್ಲಿ ಯಾವುದರಮೇಲೆ ನಿನಗೆ ಹೆಚ್ಚು ಶ್ರದ್ಧಾಭಕ್ತಿ ಇದೆಯೋ ಅದನ್ನು ಜಪಮಾಡುವುದಕ್ಕೆ ತೆಗೆದುಕೊ.

ಭಕ್ತ : ಆಕಾರವಿಲ್ಲದೆ ಧ್ಯಾನ ಸಾಧ್ಯವಿಲ್ಲ. ಯಾವ ಆಕಾರವನ್ನು

ಧ್ಯಾನಮಾಡಲಿ, ಅದನ್ನು ಎಲ್ಲಿ ಮಾಡಲಿ?

ಸ್ವಾಮಿಜಿ: ಯಾವುದರಮೇಲೆ ನಿನಗೆ ಇಷ್ಟವೊ ಅದನ್ನು ಕುರಿತು ಧ್ಯಾನಮಾಡು. ಅದನ್ನು ನಿನ್ನ ಹೃದಯದಲ್ಲೋ, ಅಥವಾ ಇನ್ನು ಎಲ್ಲಿ ಯಾದರೂ ಹೆಚ್ಚು ಧ್ಯಾನಮಾಡು. ಯೋಗ್ಯ ಗುರುವಿಗೆ, ಶಿಷ್ಯನಿಗೆ ಯಾವ ದೇವರಮೇಲೆ ಹೆಚ್ಚು ಭಕ್ತಿ, ಶ್ರದ್ಧೆ ಇದೆ ಎಂಬುದು ಗೊತ್ತಾಗು ವುದು. ಅವರು ಅದರಂತೆಯೇ ಸೂಕ್ತವಾದ ಆಕಾರದಮೇಲೆ ಧ್ಯಾನ ಮಾಡುವಂತೆ ಹೇಳುವರು.

ಮಾನಸಿಕಪೂಜೆ ಬೇರೆ ಇದೆ. ಹೊರಗೆ ಹೇಗೆ ಹೂವು, ಚಂದನ, ಕರ್ಪೂರದಿಂದ ಪೂಜೆಮಾಡುತ್ತೀಯೊ ಇದೂ ಹಾಗೆಯೆ. ನಿನ್ನ ಇಷ್ಟ ದೇವತೆಯನ್ನು ಮನಸ್ಸಿನಲ್ಲಿ ಕಲ್ಪಿಸಬೇಕು. ಪೂಜೆಯಲ್ಲಿ ಉಪಯೋಗಿಸುವ ಸಾಮಗ್ರಿಯವನ್ನೆಲ್ಲ ಉಪಯೋಗಿಸಬೇಕು. ಹೃದಯದಲ್ಲಿ, ಭಕ್ತಿ ಗೌರವ ದಿಂದ ಅವನನ್ನು ಪ್ರಾರ್ಥಿಸಬೇಕು. ನೀನು ಬೇಕಾದಷ್ಟು ಕೇಳಿರುವೆ. ಈಗ ಸ್ವಲ್ಪ ಕಾರ್ಯತಃ ತೋರಿಸು. ಇನ್ನು ಕಾಲವನ್ನು ಕಳೆಯಬೇಡ. ಈ ದಿನವೇ, ಇಂದಿನ ಸಾಯಂಕಾಲವೆ ಪ್ರಾರಂಭಮಾಡು. ಸದ್ಯಕ್ಕೆ ಈ ಎರಡನ್ನು ಮಾಡು. ಜಪ, ಧ್ಯಾನ, ಪ್ರತಿದಿನ ಬೆಳಿಗ್ಗೆ ಸಾಯಂಕಾಲ ತಪ್ಪದೆ ಮಾಡು. ಹೀಗೆ ಕೆಲವು ವರುಷಗಳಾದರೂ ಮಾಡು. ಆಗ ಸಂತೋಷವಾಗುವುದು. ನಮ್ಮ ಸಮೀಪಕ್ಕೆ ಹಲವುವೇಳೆ ಬರುವೆ. ಹೆಚ್ಚು ಹೆಚ್ಚು ಆಧ್ಯಾತ್ಮಿಕವಿಷಯಗಳನ್ನು ತಿಳಿದುಕೊಳ್ಳುವೆ.

ಸದ್ಯಕ್ಕೆ ಇಷ್ಟೇ ಸಾಕು. ಕ್ರಮೇಣ ಇನ್ನೂ ಏನೇನು ಮಾಡ ಬೇಕೆಂಬುದನ್ನು ಹೇಳುತ್ತೇನೆ. ಈಗ ಮಾನಸಿಕಪೂಜೆಯ ವಿಚಾರವನ್ನು ಮಾಡಬೇಕಾಗಿಲ್ಲ. ಸದ್ಯಕ್ಕೆ ಅದನ್ನು ಬಿಡು. ಉಪದೇಶ ಪಡೆದಾದ ಮೇಲೆ ನೀನು ಅದನ್ನು ಮಾಡಬೇಕಾಗಿದ್ದರೆ ಅದನ್ನು ಹೇಳುತ್ತೇನೆ. ಉಪದೇಶದ ವಿಚಾರವಾಗಿಯೂ ಸದ್ಯಕ್ಕೆ ನೀನು ಕಾತರನಾಗಬೇಕಾಗಿಲ್ಲ. ನಾನು ಹೇಳುವಷ್ಟನ್ನು ಈಗಮಾಡು. ಜಾಸ್ತಿ ಬೇಕಾಗಿಲ್ಲ. ಮಗು, ಕಾಲಹರಣಮಾಡಬೇಡ, ಇಂದಿನಿಂದಲೇ ಪ್ರಯತ್ನಪಡು; ಧೈರ್ಯವಾಗಿ ಮುಂದುವರಿ.

ಕುಳಿತುಕೊಳ್ಳುವುದಕ್ಕೆ ಒಂದು ಹೊಸ ಆಸನವನ್ನೇನಾದರೂ ತೆಗೆದುಕೊ. ಪೂಜೆ, ಧ್ಯಾನದ ಸಮಯದಲ್ಲಿ ಮಾತ್ರ ಅದನ್ನು ಉಪ ಯೋಗಿಸುವುದಕ್ಕೆ ಪ್ರತ್ಯೇಕವಾಗಿಡು. ನಿನ್ನ ಧ್ಯಾನ ಮುಂತಾದ ಸಾಧನೆಗೆ ಒಂದು ನಿರ್ಜನ ಪ್ರದೇಶವನ್ನು ಹುಡುಕು. ನಿನ್ನ ತೋಟದ ಮನೆ

ನಿರ್ಜನ ಪ್ರದೇಶದಲ್ಲಿರಬಹುದು. ಮನೆಯಲ್ಲಿ ತೊಂದರೆಯಾದರೆ ಮಧ್ಯೆ ಮಧ್ಯೆ ಅಲ್ಲಿಗೆ ಹೋಗು. ಕಾಶೀಕ್ಷೇತ್ರದಲ್ಲಿ ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಸುಲಭವಾಗಿ ಪಡೆಯಬಹುದು. ಇದನ್ನು ಯಾವಾಗಲೂ ನೆನಪಿನಲ್ಲಿಡು. ನೀನು ಬಿಡದೆ ಎರಡು ವರುಷವಾದರೂ ಸಾಧನೆಮಾಡಿದರೆ ಏನಾದರೂ ಪಡೆಯಬಹುದು. ಕೆಲವರು ಒಂದು ವರುಷದಲ್ಲೇ ಪಡೆದವರೂ ಇರುವರು. ಇಂದಿನಿಂದಲೇ ಶುರುಮಾಡು. ಕೆಲವು ದಿನಗಳಾದಮೇಲೆ ಮನಸ್ಸಿನಲ್ಲಿ ಅಷ್ಟು ಆನಂದವಾಗುವುದು. ಹೆಚ್ಚು ಹೆಚ್ಚು ಧ್ಯಾನಮಾಡಬೇಕೆಂದು ಅನ್ನಿಸುವುದು.

ತೀರ್ಥಯಾತ್ರೆ ಮಾಡು, ಧ್ಯಾನ ಅಧ್ಯಯನ ಮಾಡು, ಕೆಲವುವೇಳೆ ನನ್ನ ಹತ್ತಿರ ಬಂದುಹೋಗು. ಧ್ಯಾನಮಾಡುವಾಗ ನೇರವಾಗಿ ಕುಳಿತುಕೊ. ಪದ್ಮಾಸನ ಹಾಕು. ಹೃದಯದ ಹತ್ತಿರದಲ್ಲೊ, ಅದಕ್ಕಿಂತ ಸ್ವಲ್ಪ ಕೆಳಗೋ ಕೈಯನ್ನು ಹಿಡಿದುಕೊ. ಕುಳಿತೊಡನೆಯೆ ಧ್ಯಾನಕ್ಕೆ ಶುರು ಮಾಡಬೇಡ. ಕೆಲವು ನಿಮಿಷ ಸುಮ್ಮನೆ ಕುಳಿತು ಮನಸ್ಸನ್ನು ಖಾಲಿ ಮಾಡು. ಯಾವ ಬೇರೆ ಆಲೋಚನೆ ಬರದಂತೆ ಮಾಡು. ನಂತರ ಮಾತ್ರ ಧ್ಯಾನವನ್ನು ಪ್ರಾರಂಭಮಾಡು. ಮೊದಲು ಒಂದು ಅಥವಾ ಎರಡು ವರುಷ ಬಹಳ ಶ್ರಮಪಡಬೇಕು. ನಂತರ ಧ್ಯಾನ ಸ್ವಾಭಾವಿಕವಾಗುವುದು. ಯಾವತ್ತಾದರೂ ಹೆಚ್ಚು ಕೆಲಸವಿದ್ದರೆ ಅಂದು ನೀನು ಧ್ಯಾನಕ್ಕೆ ಒಂದು ಸಲ ಕುಳಿತುಕೊಂಡರೆ ಸಾಕು. ಅಥವಾ ಹತ್ತುಹದಿನೈದು ದಿನಗಳಲ್ಲಿ ಅದನ್ನು ಪೂರೈಸಿದರೂ ಸಾಕು. ಇನ್ನೂ ಹೆಚ್ಚು ಕೆಲಸವಿದ್ದರೆ ಮನಸ್ಸನ್ನು ಕ್ಷಣಕಾಲ ದೇವರಮೇಲೆ ನಿಲ್ಲಿಸಿ, ನಮಸ್ಕಾರಮಾಡಿ ಧ್ಯಾನ ಪೂರೈಸು. ತುಂಬಾ ಅನಿವಾರ್ಯವಾದ ಸಮಯದಲ್ಲಿ ಮಾತ್ರ ಹೀಗೆಮಾಡಬೇಕು. ಯಾವಾಗಲೂ ಅಲ್ಲ.

ಬೆಳಿಗ್ಗೆ ಧ್ಯಾನಮಾಡುವುದಕ್ಕೆ ಮುಂಚೆ ಕೈಕಾಲುಮುಖ ತೊಳೆದು, ಮಡಿಬಟ್ಟೆಯುಟ್ಟು ಧ್ಯಾನಕ್ಕೆ ಕುಳಿತುಕೊ. ಸ್ವಲ್ಪ ಗಂಗಾಜಲವನ್ನು ತೆಗೆದುಕೊಳ್ಳಬಹುದು. ಸಂಜೆಯೂ ಹಾಗೆ ಮಾಡು. ಪ್ರತಿದಿನ ನೀನು ಹೀಗೆ ತಪ್ಪದೆ ಮಾಡಿದರೆ ಶಾಂತಿ ದೊರಕುವುದು. ಸಂತೋಷವಾಗಿರುವೆ ಎಂದು ನಿನಗೆ ಭರವಸೆಕೊಡುತ್ತೇನೆ.

ನೀತಿಯ ವಿಷಯದಲ್ಲಿ ಈ ಎರಡು ನಿಯಮವನ್ನು ಆಚರಿಸು. ಸತ್ಯ ಹೇಳು, ಎಲ್ಲಾ ಸ್ತ್ರೀಯರನ್ನೂ ಮಾತೆಯರಂತೆ ಕಂಡು ಗೌರವಿಸು. ಸದ್ಯಕ್ಕೆ ಮತ್ತೇನನ್ನೂ ಮಾಡಬೇಕಾಗಿಲ್ಲ. ಈ ಎರಡು ನಿಯಮವನ್ನು

ಅನುಸರಿಸಿದರೆ ಉಳಿದ ಒಳ್ಳೆಯ ಶೀಲವೆಲ್ಲ ಕ್ರಮೇಣ ನಿನ್ನ ಮೂಲಕ ವ್ಯಕ್ತವಾಗುವುದು.

ದೇವರಿರುವನು ಎಂದು ನಂಬು. ಅವನಿಲ್ಲವೆಂದು ಎಂದೂ ಹೇಳಬೇಡ. ಮಗು, ನಾನು ಹೇಳುತ್ತೇನೆ ಕೇಳು. ವೃಥಾ ಕಾಲಹರಣ ಮಾಡಬೇಡ. ದೇವರು ಇರುವನು. ಅವನನ್ನು ಹೆಚ್ಚು ಭಕ್ತಿ ಮತ್ತು ದೈನ್ಯದಿಂದ ಪ್ರಾರ್ಥಿಸು. ವೃಥಾ ಕಾಲಹರಣಮಾಡಬೇಡ. ಅನುಮಾನ ಬೇಡ. ಸೋಮಾರಿಯಾಗಬೇಡ. ಇಂದಿನಿಂದಲೇ ಪ್ರಾರಂಭಮಾಡು, ಮುಂದುವರಿ. ಉಳಿದುದನ್ನು ನಾನು ನೋಡಿಕೊಳ್ಳುತ್ತೇನೆ.

೩೦

## ಧ್ಯಾನಕ್ರಮ

ಶಿಷ್ಯ : ಸ್ವಾಮಿಜಿ, ಕೆಲವರು ಇಷ್ಟದೇವರನ್ನು ಹೃದಯದಲ್ಲಿ ಮತ್ತೆ ಕೆಲವರು ತಲೆಯಲ್ಲಿ ಧ್ಯಾನಿಸುವರು. ನಾನು ನಿಮ್ಮನ್ನೇ ನೋಡುವಂತೆ ಹೊರಗೆ ನೋಡುವೆನು. ಯಾವುದು ಸರಿ?

ಸ್ವಾಮಿಜಿ : ಸಾಧನೆ ವ್ಯತ್ಯಾಸವಾದಂತೆ ಧ್ಯಾನಕ್ರಮವೂ ವ್ಯತ್ಯಾಸವಾಗುವುದು. ಸಾಧಾರಣವಾಗಿ ಹೃದಯದಲ್ಲಿ ಇಷ್ಟದೇವತೆಯನ್ನು ಧ್ಯಾನಿಸುವುದು ಒಳ್ಳೆಯದು. ದೇಹವನ್ನು ದೇವಸ್ಥಾನವೆಂದು ಅದರಲ್ಲಿ ದೇವರು ಇರುವನೆಂದೂ ಭಾವಿಸಿ ತಪ್ಪದೆ ಸಾಧನೆಮಾಡು. ಮನಸ್ಸು ಸ್ಥಿರವಾದಮೇಲೆ ಮಾತ್ರ ಇಷ್ಟದೇವತಾದರ್ಶನ ಲಭ್ಯ. ಅದು ಹೃದಯದಲ್ಲಾಗಲಿ, ತಲೆಯಲ್ಲಾಗಲಿ ಎಲ್ಲಿ ಇಷ್ಟದೇವತಾದರ್ಶನವಾಗುವುದೋ ಅಲ್ಲಿ ಧ್ಯಾನವನ್ನು ಸುಲಭವಾಗಿ ಮಾಡಬಹುದು.

ಧ್ಯಾನದಲ್ಲಿ ಮುಂದುವರಿದರೆ ದಿವ್ಯಕಾಂತಿ ಗೋಚರಿಸುವುದು. ಈ ಅನುಭವದ ಜೊತೆಯಲ್ಲಿ ಅಥವಾ ಕೆಲವು ಕಾಲಾನಂತರ ಭವ್ಯ ಆನಂದವನ್ನು ಅನುಭವಿಸುವನು. ಈ ಆನಂದವನ್ನು ತೊರೆದು ಮುಂದುವರಿಯುವುದಕ್ಕೆ ಮನಸ್ಸು ಬರುವುದಿಲ್ಲ. ಇನ್ನೂ ಮುಂದುವರಿದರೆ ಆ ಕಾಂತಿ ಒಂದು ಸ್ಪಷ್ಟವಾದ ಆಕಾರವನ್ನು ತಾಳುವುದು. ಆ ಭಾವನೆಯಲ್ಲಿ ಮನಸ್ಸು ತಲ್ಲೀನವಾಗಲು ಯತ್ನಿಸುವುದು. ಪ್ರಣವಧ್ವನಿಯನ್ನು ನಿರಂತರ ಕೇಳುವುದರಿಂದ ಮನೋಲಯ ಸಾಧ್ಯ.

ಆಧ್ಯಾತ್ಮಿಕ ಅನುಭವಗಳಿಗೆ ಒಂದು ಕೊನೆ ಇಲ್ಲ. ತಿಳಿದಷ್ಟೂ ತಿಳಿಯುವುದು ಇನ್ನೂ ಇರುವುದು. ಇವಕ್ಕೊಂದು ಮಿತಿ ಇಲ್ಲ. ಅನಂತ ಇದು. ಎಲ್ಲೋ ಕೊಂಚ ಆ ಆನಂದವನ್ನು ಅನುಭವಿಸಿ ತಾವು ಆ ಗುರಿ

ಯನ್ನು ಮುಟ್ಟಿರುವೆವು ಎಂದು ಭಾವಿಸುವರು. ಆದರೆ ಹಾಗಿಲ್ಲ ಸತ್ಯ. ಕೆಲವರ ದೃಷ್ಟಿಯಲ್ಲಿ ಮನಸ್ಸು ನಿಶ್ಚಲವಾದಾಗ ಮಾತ್ರ ಆಧ್ಯಾತ್ಮಿಕ ಅನುಭವ ಪ್ರಾರಂಭವೆಂದೂ ಮತ್ತೆ ಕೆಲವರು ಅದೇ ಕೊನೆ ಎಂದೂ ತಿಳಿಯುವರು.

ಶಿಷ್ಯ : ಸಾಧಾರಣವಾಗಿ ಮನಸ್ಸು ಆಧ್ಯಾತ್ಮಿಕ ದಾರಿಯಲ್ಲಿ ಸ್ವಲ್ಪ ದೂರ ಹೋದಮೇಲೆ ಮುಂದೆ ಹೋಗುವುದೇ ಇಲ್ಲ. ಏತಕ್ಕೆ ಅದು ನಿಲ್ಲುವುದು ?

ಸ್ವಾಮಿಜಿ : ಮನಸ್ಸಿನ ದುರ್ಬಲತೆಯೆ ಇದಕ್ಕೆ ಕಾರಣ. ಮನಸ್ಸು ತನ್ನ ಶಕ್ತಿಗೆ ತಕ್ಕಂತೆ ಸ್ವಲ್ಪದೂರ ಹೋಗಿ ನಿಲ್ಲುವುದು. ಅಲ್ಲಿಂದ ಮುಂದಕ್ಕೆ ಹೋಗಲಾರದು. ಎಲ್ಲಾ ಮನಸ್ಸನ್ನೂ ಅಭಿವೃದ್ಧಿಮಾಡಲು ಸಾಧ್ಯ ಮತ್ತು ಹಾಗೆ ಮಾಡಲೇಬೇಕು. ಆ ಮನಸ್ಸನ್ನು ಹೆಚ್ಚುಹೆಚ್ಚು ಅಭಿವೃದ್ಧಿಗೊಳಿಸಬಹುದು. ಕೋಪ ಅಥವಾ ಕಾಮಕ್ಕೆ ಬಿದ್ದರೂ ಬಲವಾದ ಮನಸ್ಸು ಇದನ್ನು ಲೆಕ್ಕಿಸುವುದಿಲ್ಲ. ಇಂತಹ ಆಲೋಚನೆಯನ್ನು ಗಮನಕ್ಕೇ ತರುವುದಿಲ್ಲ. ಅಂತಹ ಮನಸ್ಸಿಗೆ ಇದರಿಂದ ಏನೂ ಅಪಾಯವಿಲ್ಲವೆಂದು ದೃಢವಾಗಿ ಗೊತ್ತಿದೆ. ಸಾಧನೆಯ ದಾರಿಯಲ್ಲಿ ಎಷ್ಟೋ ಆತಂಕಗಳಿವೆ. ಬಾಹ್ಯ ಆತಂಕಗಳನ್ನು ಆಂತರಿಕ ಆತಂಕಗಳೊಡನೆ ಹೋಲಿಸಿ ನೋಡಿದರೆ ಗಣನೆಗೇ ಬಾರವು. ಆದಕಾರಣವೆ ಪೂಜೆ ಸಮಯದಲ್ಲಿ ಆಸನ, ಮುದ್ರೆ ಮುಂತಾದುವುಗಳ ಆವಶ್ಯಕತೆ.

ಶಿಷ್ಯ : ಸ್ವಾಮಿಜಿ, ನೀವು ನಮ್ಮನ್ನು ಕರೆದು ನಮ್ಮ ಸಾಧನೆ ಮತ್ತು ನಮ್ಮ ಕಷ್ಟಗಳನ್ನು ವಿಚಾರಿಸುತ್ತೀರಿ. ನೀವು ಕೊಡುವ ಪ್ರೋತ್ಸಾಹ ನಮ್ಮ ಅಂಜಿಕೆ ಆತಂಕಗಳನ್ನೆಲ್ಲ ಹೋಗಲಾಡಿಸಿ ಧೈರ್ಯ ನೀಡುವುದು. ಎಂದಿಗೂ ರಾಜಿಮಾಡಿಕೊಳ್ಳದಂತೆ ಮಾಡುವುದು.

ಸ್ವಾಮಿಜಿ : ಮಗು ! ಅಂತಹ ಸ್ವಭಾವ ಯಾವಾಗಲೂ ಬರುವುದಿಲ್ಲ. ಕೆಲವುವೇಳೆ ಮನಸ್ಸು ನಿಮ್ಮೆಲ್ಲರ ಕಾಲುಮುಟ್ಟಿ, "ಮಗು, ನಾನು ಬೇಡಿಕೊಳ್ಳುತ್ತೇನೆ, ಹೀಗೆ ಮಾಡು" ಎಂದು ಕೇಳುವಂತೆ ಇರುವುದು. ಮತ್ತೆ ಕೆಲವುವೇಳೆ "ನಿಮಗೆಲ್ಲ ಬೋಧನೆಮಾಡುವುದಕ್ಕೆ ನಾನಾರು, ಭಗವಂತ ನಿರುವನು. ಅವನು ನಮ್ಮನ್ನು ಮಾಡಿಸುವಂತೆ ಮಾಡುವೆವು. ಯಾರನ್ನು ಕೇಳುವುದು ? ದೇವರೇ ಕಾರಣ, ಅವನೇ ಯಂತ್ರ, ಅವನೇ ಸರ್ವವೂ" ಎಂದು ಯೋಚಿಸುವೆನು. ಜನರು ನನ್ನನ್ನು ಕೇಳಿದರೂ ಏತಕ್ಕೆ ನನ್ನ ಮಾತನ್ನು ಸ್ವೀಕರಿಸಬೇಕು ! ಆದರೆ ಸ್ಫೂರ್ತಿ ಒಳಗಿನಿಂದ ಬಂದರೆ ಜನರು

ಅದನ್ನು ಸ್ವೀಕರಿಸಿ ಅದರಂತೆ ನಡೆಯುವರು.

ಮಗು! ಹೋರಾಡು! ಹೋರಾಡು! ಒಂದುಕ್ಷಣವನ್ನೂ ವ್ಯರ್ಥ ಮಾಡಬೇಡ. ಪ್ರತಿದಿನ ಸಂಜೆ ಶ್ರೀರಾಮಕೃಷ್ಣರು ಅತ್ತು "ಜಗನ್ಮಾತೆ, ಮತ್ತೊಂದುದಿನ ಕಳೆದುಹೋಯಿತು. ಆದರೂ ನೀನು ದರ್ಶನವನ್ನು ಕೊಡಲಿಲ್ಲ" ಎಂದು ಬೇಡುತ್ತಿದ್ದರು. ಹೀಗೆ ವ್ಯಾಕುಲರಾಗಿ ಅವನಲ್ಲಿ ತನ್ಮಯರಾಗಿ.

## ೩೧

## ದರ್ಶನ

ಶಿಷ್ಯ: ಭಗವಂತನ ಕೃಪೆಗೆ ಏನಾದರೂ ನಿಯಮವಿರುವುದೆ?

ಸ್ವಾಮಿಜಿ: ಶ್ರೀರಾಮಕೃಷ್ಣರು "ಬಿಸಿಲಾದಾಗ ಮನುಷ್ಯ ಬೀಸಣಿಗೆಯಿಂದ ಬೀಸಿಕೊಳ್ಳುವನು. ಆದರೆ ತಂಗಾಳಿ ಬೀಸಲು ಮೊದಲಾದರೆ ಬೀಸುವುದನ್ನು ನಿಲ್ಲಿಸುವನು" ಎನ್ನುತ್ತಿದ್ದರು. ಭಗವಂತನ ಕೃಪೆಯೂ ಹಾಗೆಯೆ.

ಶಿಷ್ಯ: ನಿಜವಾದ ಭಗವಂತನ ದರ್ಶನಕ್ಕೂ, ಭ್ರಾಂತಿಗೂ ಏನು ವ್ಯತ್ಯಾಸ? ಅದನ್ನು ಹೇಗೆ ವಿಮರ್ಶಿಸುವುದು?

ಸ್ವಾಮಿಜಿ: ಭಗವಂತನ ದರ್ಶನದಿಂದ ಶಾಶ್ವತಶಾಂತಿ ಲಭಿಸುವುದು. ಒಬ್ಬನ ಮನಸ್ಸು ತನಗೆ ತಾನೆ ಅದನ್ನು ತಿಳಿದುಕೊಳ್ಳುವುದು.

ಶಿಷ್ಯ: ಬಾಹ್ಯಪೂಜೆಯಲ್ಲಿ ಮುದ್ರೆ ಮುಂತಾದುವುಗಳ ಆವಶ್ಯಕತೆಯೇನು?

ಸ್ವಾಮಿಜಿ: ಮನಸ್ಸು ಹಲವು ಹೀನಪ್ರಭಾವಗಳಿಗೆ ಸಿಕ್ಕಿ ಚಂಚಲವಾಗಿರುವುದು. ಕೆಲವುವೇಳೆ ನೀನು, ನಾನು ಸರಿಯಾಗಿರುವೆನು, ಧ್ಯಾನ ಮಾಡಿದರೆ ಏಕಾಗ್ರವಾಗುವುದೆಂದು ತಿಳಿದಿರಬಹುದು. ಆದರೆ ಧ್ಯಾನಕ್ಕೆ ಕುಳಿತುಕೊಂಡ ಐದು ನಿಮಿಷಗಳೊಳಗೆ ಎಷ್ಟೋ ಆಲೋಚನೆಗಳೆದ್ದು ಮನಸ್ಸನ್ನು ಚಂಚಲಗೊಳಿಸುವುವು. ಒಂದುಸಲ, ಕೆಟ್ಟ ಆಲೋಚನೆ ನನ್ನಲ್ಲಿ ಎದ್ದಿತು. ದೂರದಿಂದ ನಾನು ಪರಮಹಂಸರ ಹತ್ತಿರ ಬರುತ್ತಿದ್ದಾಗ ಅವರಿಗೆ ಗೊತ್ತಾಗಿ, "ಮಗು, ಕೆಟ್ಟ ಆಲೋಚನೆಯೊಂದು ನಿನ್ನನ್ನು ಬಾಧಿಸುತ್ತಿರುವುದು ಕಾಣುವುದು" ಎಂದು ನನ್ನ ತಲೆಯಮೇಲೆ ಕೈಯನ್ನು ಇಟ್ಟು ಆಶೀರ್ವದಿಸಿ ಏನನ್ನೊ ಉಚ್ಚರಿಸಿದರು. ಐದು ನಿಮಿಷದಲ್ಲಿ ಅದು ಮಾಯವಾಯಿತು. ಮನಸ್ಸು ಮೇಲಿನ ಮಟ್ಟದಲ್ಲಿ ಸಂಚರಿಸುತ್ತಿರುವಾಗ ಯಾವ ಹೀನ ಆಲೋಚನೆಯ ಪ್ರಭಾವವೂ ಅಲ್ಲಿಗೆ ಹೋಗಿ ತೊಂದರೆ

ಕೊಡಲಾರದು.

*     *     *     *     *

ಶಿಷ್ಯ : ಗುರುಪೂಜೆಯಿಂದ ಧ್ಯಾನ ಪ್ರಾರಂಭವಾಗಬೇಕೆಂದು ಕೇಳಿರುವೆನು. ಅದನ್ನು ಹೇಗೆ ಮಾಡಬೇಕೋ ನನಗೆ ಗೊತ್ತಿಲ್ಲ. ದಯವಿಟ್ಟು ಹೇಳಿ.

ಸ್ವಾಮಿಜಿ : ಇದೇನೂ ಆವಶ್ಯಕವಿಲ್ಲ. ಇಷ್ಟಪೂಜೆಯೊಂದು ಸಾಕು.

ಶಿಷ್ಯ : ಗುರುಪೂಜೆ ಹೇಗೆ?

ಸ್ವಾಮಿಜಿ : ಅದು ಹೇಗೆ ಎಂಬುದನ್ನು ಸ್ವಾಮಿ ಪ— ಇವರಿಂದ ತಿಳಿದುಕೊಳ್ಳಬಹುದು.

ಶಿಷ್ಯ : ದಯವಿಟ್ಟು ನೀವೇ ಹೇಳಿ. ಅವರು ಹೇಳದೆ ಇರಬಹುದು.

ಸ್ವಾಮಿಜಿ : ಆಗಲಿ, ಮೊದಲು ಇಷ್ಟದೇವತಾಧ್ಯಾನದಂತೆಯೆ, ಗುರುವಿನಮೇಲೂ ಹೃದಯಕಮಲದಲ್ಲಿ ಧ್ಯಾನಿಸಬೇಕು. ಸ್ವಲ್ಪಕಾಲದ ಮೇಲೆ ಇಷ್ಟದೇವತೆಯಲ್ಲಿ ಗುರು ತಲ್ಲೀನನಾಗುತ್ತಿರುವನು ಎಂದು ಭಾವಿಸಿ. ಇಷ್ಟದೇವತೆಯ ಮಂಗಳಮೂರ್ತಿಯಮೇಲೆ ಧ್ಯಾನಮಾಡಿ.

## ೩೨
## ತಪಸ್ಯ

ಸ್ವಾಮಿಜಿ : ನಾಲ್ಕೈದುವಿಧ ತಪಸ್ಸಿವೆ. ಕೆಲವರು ಹೆಚ್ಚುಹೊತ್ತು ಕುಳಿತುಕೊಳ್ಳುವುದಿಲ್ಲವೆಂದು ಶಪಥಮಾಡುವರು. ಹನ್ನೆರಡುವರುಷ ಕುಳಿತುಕೊಳ್ಳುವುದಿಲ್ಲವೆಂದು ಶಪಥಮಾಡಿದ ಒಬ್ಬ ಮನುಷ್ಯನನ್ನು ನಾನು ನೋಡಿದ್ದೆ. ಆಗ ತನ್ನ ವ್ರತವನ್ನಾಗಲೇ ಪೂರೈಸುತ್ತಾ ಬಂದಿದ್ದ. ಎಲ್ಲೋ ಐದಾರು ತಿಂಗಳು ಉಳಿದಿತ್ತು. ಯಾವಾಗಲೂ ನಿಂತುನಿಂತು ಆನೆಯ ಕಾಲಿನಂತೆ ಆಗಿತ್ತು ಅವನ ಕಾಲು. ನಿದ್ದೆಮಾಡುವಾಗ ಅವನು ಒಂದು ಹಗ್ಗವನ್ನು ಹಿಡಿದುಕೊಳ್ಳುತ್ತಿದ್ದನು. ಅದರ ಕೊನೆಯಲ್ಲಿ ಒಂದು ಸಣ್ಣ ಮರದ ತುಂಡನ್ನು ಕಟ್ಟಿ ಅದನ್ನು ಹಿಡಿದುಕೊಂಡು ರಾತ್ರಿಯವೇಳೆ ನಿದ್ರಿಸುತ್ತಿದ್ದ. ಮತ್ತೊಂದು ತಪಸ್ಸಿದೆ. ಚಳಿಗಾಲದಲ್ಲಿ ರಾತ್ರಿಹೊತ್ತು ತಣ್ಣೀರಿನಲ್ಲಿ ಕತ್ತಿನವರೆಗೂ ನಿಂತು ತಪಸ್ಸುಮಾಡುವುದು. ಮತ್ತೊಂದು ತಪಸ್ಸೆ ಬೇಸಿಗೆಯಕಾಲದಲ್ಲಿ ದಿನವೆಲ್ಲ ಪಂಚಾಗ್ನಿಯ ಮಧ್ಯದಲ್ಲಿ ಇದ್ದು ಧ್ಯಾನಮಾಡುವುದು. ಮಳೆಹೊಡೆದಿರುವ ಆಸನದಮೇಲೆ ಕುಳಿತೊ, ನಿಂತೊ ಧ್ಯಾನಮಾಡುವುದು.

ಶಿಷ್ಯ : ಇದು ನಿಜವಾದ ತಪಸ್ಸೆ?

ಸ್ವಾಮಿಜಿ: ದೇವರಿಗೇ ಗೊತ್ತು! ಯಾವುದೋ ಒಂದು ಪ್ರಾಪಂಚಿಕ ಉದ್ದೇಶದಿಂದ ಮಾಡುತ್ತಾರೆ. ಬರುವ ಜನ್ಮದಲ್ಲಿ ರಾಜರಾಗಿಯೊ ಅತಿ ಶ್ರೀಮಂತರಾಗಿಯೊ ಪ್ರಪಂಚವನ್ನು ಭೋಗಿಸಬಹುದೆಂದು ತಿಳಿಯುವರು. ಅವರೇ ಇದನ್ನು ಒಪ್ಪಿಕೊಂಡಿರುವರು.

ಶಿಷ್ಯ: ಅವರ ಇಚ್ಛೆ ಈಡೇರುವುದೆ?

ಸ್ವಾಮಿಜಿ: ದೇವರಿಗೇ ಗೊತ್ತು!

ಶಿಷ್ಯ: ಹಾಗಾದರೆ ನಿಜವಾದ ತಪಸ್ಸೇನು?

ಸ್ವಾಮಿಜಿ: ನಿಜವಾದ ತಪಸ್ಸು ಇಂತಹ ಕಸರತ್ತು ಅಲ್ಲ. ಯಾರಾದರೂ ಅಭ್ಯಾಸಬಲದಿಂದ ಇವನ್ನು ಮಾಡಬಹುದು. ದೇಹವನ್ನು ಗೆಲ್ಲುವುದು ಸುಲಭ. ಮನಸ್ಸನ್ನು ಗೆಲ್ಲುವುದೇ ಮಹಾಪ್ರಯಾಸ. ಕಾಮ ಕ್ರೋಧ, ಮೋಹ, ಹೆಸರು, ಕೀರ್ತಿ, ಆಸೆ ಇವುಗಳಿಂದ ಪಾರಾಗಬೇಕಾದರೆ ಬಹಳ ಕಷ್ಟ. ನಿಜವಾದ ತಪಸ್ಸು ಈ ಮೂರು ವಿಷಯಗಳಲ್ಲಿದೆ. (೧) ಸತ್ಯವಂತನಾಗಿರಬೇಕು; ಯಾವಾಗಲೂ ಸತ್ಯದ ಆಧಾರದಮೇಲೆ ನಿಲ್ಲಬೇಕು. ನಿನ್ನ ಪ್ರತಿಯೊಂದು ಅಂಶವೂ ಸತ್ಯವಾಗಿರಬೇಕು. (೨) ಕಾಮದಿಂದ ಪಾರಾಗಬೇಕು. (೩) ಪೂರ್ವವಾಸನೆಯನ್ನು ನಿಗ್ರಹಿಸಬೇಕು. ನಾವು ಮುಖ್ಯವಾಗಿ ಪಾಲಿಸಬೇಕಾದುದು ಇದು. ಇವುಗಳಲ್ಲಿ ಎರಡನೆಯದು ಬಹು ಮುಖ್ಯ. ಅದೇ ಬ್ರಹ್ಮಚರ್ಯ. ನಿಜವಾದ ತಪಸ್ಸಿರುವುದು ಇಲ್ಲಿ. ಹನ್ನೆರಡು ವರುಷ ಬ್ರಹ್ಮಚರ್ಯೆಯನ್ನು ನಿಷ್ಠೆಯಿಂದ ಪರಿಪಾಲಿಸಿದರೆ ದೇವರನ್ನು ಪಡೆಯುವುದು ಸುಲಭವಾಗುವುದೆಂದು ನಮ್ಮ ಶಾಸ್ತ್ರಗಳು ಹೇಳುವುವು. ಇದು ಬಹಳ ಕಷ್ಟ. ಇದನ್ನು ನನ್ನ ಸ್ವಂತ ಅನುಭವದಿಂದ ಹೇಳುತ್ತೇನೆ. ಬ್ರಹ್ಮಚರ್ಯವಿಲ್ಲದೆ ನಿಜವಾದ ಧ್ಯಾನ ಸಾಧ್ಯವಿಲ್ಲವೆಂದು ನನಗೆ ಗೊತ್ತಾಗಿದೆ. ಸೂಕ್ಷ್ಮವಾಸನೆಯನ್ನು ನಿಗ್ರಹಿಸುವುದು ಕಷ್ಟ. ಆದಕಾರಣವೆ ಸನ್ಯಾಸಿ ಪಾಲಿಸಬೇಕಾದ ನಿಯಮ ಅತಿಕಠಿಣ. ಸನ್ಯಾಸಿ ಸ್ತ್ರೀಯರನ್ನು ಕತ್ತೆತ್ತಿ ನೋಡಲೂ ಕೂಡದು. ನೋಡಿದರೆ ಮನಸ್ಸಿನಲ್ಲಿ ಅವರ ಚಿತ್ರ ನಿಲ್ಲುವುದು. ಇಂದ್ರಿಯಗಳಿಗೆ ಹಿತವಾಗಿರುವ ಯಾವುದನ್ನಾದರೂ ನೋಡಿದರೆ ಅದರ ಸ್ವಭಾವವೇ ಅದನ್ನು ಆನಂದಿಸಬೇಕೆನ್ನುವುದು. ನಾವು ಮನಸ್ಸಿನಲ್ಲಿಯೇ ಅದರ ಅರಿವಿಲ್ಲದೆ ಅದನ್ನು ಭೋಗಿಸುತ್ತೇವೆ. ಇದು ಬಹಳ ಹಾನಿಕಾರಿ. ಸಾಧು ಕನಸಿನಲ್ಲಿ ಸ್ತ್ರೀಯರನ್ನು ನೋಡಿದರೆ, ಅಥವಾ ಸ್ವಪ್ನಸ್ಖಲಿತನಾದರೆ ಪ್ರಾಯಶ್ಚಿತ್ತಮಾಡಿಕೊಳ್ಳಬೇಕು. ಮಾರನೆ ದಿನ ಸ್ವಲ್ಪ ಆಹಾರವನ್ನೊ ಅಥವಾ ಆಹಾರವನ್ನೇ ತೆಗೆದುಕೊಳ್ಳದೆ

ಸಾವಿರಾರುವೇಳೆ ಜಪಮಾಡಬೇಕು. ಬ್ರಹ್ಮಚರ್ಯವಿಲ್ಲದೆ ಧ್ಯಾನಮಾಡುವ ಶಕ್ತಿ ಮನಸ್ಸಿಗೆ ಲಭಿಸುವುದಿಲ್ಲ. ಮನಸ್ಸು ಯಾವುದನ್ನೊ ಕುರಿತು ಆಲೋಚಿಸುತ್ತಿರುವುದು. ದೇವರನ್ನು ನೆನೆಯುವುದಿಲ್ಲ. ನಿಜವಾದ ಭಾವನೆ ಬರುವುದಿಲ್ಲ. ಬ್ರಹ್ಮಚರ್ಯದಲ್ಲಿ ನಿರತನಾದಮೇಲೆ ನೀನು ಬೇರೊಂದು ದೃಷ್ಟಿಯಿಂದ ಎಲ್ಲವನ್ನೂ ನೋಡುವೆ. ಎಲ್ಲ ಹೊಸದಾಗಿ ಕಾಣುವುದು. ಬ್ರಹ್ಮಚರ್ಯದಿಂದ ಓಜಸ್ಸು ಪ್ರಾಪ್ತವಾಗುವುದು. ವಿಜ್ಞಾನ ಕೂಡ ಇದನ್ನು ಹೇಳುವುದು. ವೀರ್ಯ ಅತಿಪ್ರಶಸ್ತವಾದ ರಕ್ತದಿಂದ ಆಗುವುದು.

ಶಿಷ್ಯ : ನಮ್ಮ ಹುಡುಗರಿಗೆ ಯಾರೂ ಇದನ್ನು ಒಂದು ಅಧಿಕಾರ ವಾಣಿಯಿಂದ ಹೇಳುತ್ತಿಲ್ಲ. ಇದು ಶೋಚನೀಯ.

ಸ್ವಾಮಿಜಿ : ಹಿಂದಿನಕಾಲದಲ್ಲಿ ಹುಡುಗರು ಗುರುಗಳೊಂದಿಗೆ ವಾಸಿಸುತ್ತಿದ್ದರು. ಬ್ರಹ್ಮಚಾರಿಗಳಾಗಬೇಕಾಗಿತ್ತು. ಕೆಲವು ಕಾಲದವರೆಗೆ ಬ್ರಹ್ಮಚರ್ಯ ನಿಯಮವನ್ನು ಪಾಲಿಸುತ್ತಿದ್ದರು. ಇದರಿಂದ ಗೃಹಸ್ಥಾಶ್ರಮದಲ್ಲಿ ಬಲಿಷ್ಠರಾದ ಆರೋಗ್ಯ ಸಂತಾನ ಸೃಷ್ಟಿಯಾಗುತ್ತಿತ್ತು. ಸನ್ಯಾಸಿಗಳಾದರೆ ಕಾಡಿಗೆ ಹೋಗಿ ದೇವರನ್ನು ಕುರಿತು ಧ್ಯಾನಿಸುತ್ತಿದ್ದರು.

ಶಿಷ್ಯ: ಬ್ರಹ್ಮಚರ್ಯದ ಭಾವನೆ ಬ್ರಾಹ್ಮಣ ಹುಡುಗರಿಗೆ ಮಾತ್ರ ಗೊತ್ತಿದೆ: ಹುಡುಗರಾಗಿದ್ದಾಗ ಅವರನ್ನು ಬ್ರಹ್ಮಚಾರಿಗಳೆಂದು ಕರೆಯುತ್ತಾರೆ. ಆದರೆ ಈಗ ಅದು ನಗೆಗೀಡಾಗಿದೆ. ಈ ಭಾವನೆಯನ್ನು ಎಲ್ಲರಿಗೂ ಹೇಳುವುದಕ್ಕೆ ಆಗುವುದಿಲ್ಲವೆ ?

ಸ್ವಾಮಿಜಿ: ಹೌದು, ಹೇಳಬೇಕು. ಬ್ರಹ್ಮಚರ್ಯದೊಂದಿಗೆ ಜಪವಿರಬೇಕು. ಇಲ್ಲವೆ ಇದ್ದರೆ ಬ್ರಹ್ಮಚರ್ಯ ನಿಲ್ಲಲಾರದು.

೩೩

## ಶಿಷ್ಯನಿಗೆ ಬರೆದ ಒಂದು ಪತ್ರ

ನಿನ್ನ ಪತ್ರದಿಂದ ಭಗವಂತನ ದಯೆಯಿಂದ ಸಾಧನೆಮಾಡುವುದಕ್ಕೆ ನಿನಗೆ ಇಷ್ಟವೆಂದೂ, ಅದಕ್ಕೆ ಯೋಗ್ಯವಾದ ಒಂದು ಸ್ಥಳ ನಿನಗೆ ಸಿಕ್ಕಿದೆ ಎಂದು ಕೇಳಿ ತುಂಬಾ ಸಂತೋಷವಾಯಿತು. ಎಲ್ಲಾ ಸರಿಯಾಗಿಯೇ ಇದೆ. ನಿನಗೆ ಇನ್ನೂ ವಯಸ್ಸು ಕಡಿಮೆ. ಈ ಸಮಯವನ್ನು ಚೆನ್ನಾಗಿ ಉಪಯೋಗಿಸಿಕೊ. ಪ್ರಶಸ್ತವಾದ ಕಾಲವನ್ನು ವ್ಯರ್ಥಮಾಡಬೇಡ. ದೊಡ್ಡ ದೊಡ್ಡ ತಾತ್ತ್ವಿಕವಿಷಯಗಳ ಚಿಂತೆಯನ್ನು ಬಿಟ್ಟು ದೃಢಸಾಧನೆಯಲ್ಲಿ ನಿರತನಾಗು. ಶ್ರದ್ಧೆ ಇಡು. ಮುಂದುವರಿ. ಅವಿಚ್ಛಿನ್ನ ಅಭ್ಯಾಸವಿಲ್ಲದೆ ನೀನು ಏನನ್ನೂ ಸಾಧಿಸಲಾರೆ. ವೇದಾಂತವನ್ನು ಓದುವುದರಲ್ಲಿ

ನಿನ್ನ ಇಡೀ ಜೀವಮಾನವನ್ನು ಕಳೆದರೂ ನಿನಗೆ ಅದರಿಂದ ಏನೂ ಪ್ರಯೋಜನವಾಗುವುದಿಲ್ಲ. ಈಗ ಎಲ್ಲಾ ನಿನಗೆ ಅನುಕೂಲವಾಗಿರುವುದರಿಂದ ಒಂದು ವರುಷವಾದರೂ ಸಾಧನೆಯಲ್ಲಿ ನಿರತನಾಗು. ನಿನ್ನ ಮನಸ್ಸು ಮತ್ತು ದೇಹ ಶುದ್ಧವಾಗುವುದು. ಭಗವಂತನ ದಯೆಯಿಂದ ಇನ್ನೂ ಹಲವು ವಿಷಯಗಳನ್ನು ತಿಳಿದುಕೊಳ್ಳುವೆ.

ಬೇರಾವ ಯೋಚನೆಯನ್ನೂ ಇಟ್ಟುಕೊಳ್ಳದೆ ನಿನ್ನ ಮನಸ್ಸನ್ನೆಲ್ಲಾ ದೇವರಿಗೆ ಅರ್ಪಿಸು. ಯಾವಾಗಲೂ ಜಪ, ಧ್ಯಾನ, ಮನನದಲ್ಲಿ ನಿರತನಾಗು. ಕಾಡುಹರಟೆ, ಮತ್ತೊಬ್ಬರಿಗೆ ಬುದ್ಧಿವಾದವನ್ನು ಕೊಡುವುದರಲ್ಲಿ ಕಾಲಕಳೆಯಬೇಡ. ನಿನ್ನ ದೇಹ ಬಲವಾಗಿದೆ. ಮನಸ್ಸು ಸಂಸಾರ ಚಿಂತನೆಯಿಂದ ಇನ್ನೂ ಕುಗ್ಗಿಹೋಗಿಲ್ಲ. ಸಾಧನೆಗೆ ಇದೇ ಸರಿಯಾದ ಸಮಯ. ಮನಸ್ಸು ಇನ್ನೂ ಶುದ್ಧವಾಗಿ ಮೃದುವಾಗಿರುವಾಗ ಅದಕ್ಕೆ ಒಳ್ಳೆಯ ಆಹಾರವನ್ನು ಕೊಡುವುದು ಸುಲಭ. ನಿನಗೆ ಅಂತಹ ಮನಸ್ಸಿದೆ. ಸಾಧನೆಯಲ್ಲಿ ತನ್ಮಯನಾಗಿ ಹೃತ್ಪೂರ್ವಕ ಭಗವಂತನನ್ನು ಪ್ರಾರ್ಥಿಸು. ಅವನು ನಿನ್ನ ಅನುಮಾನ ಕಷ್ಟಗಳನ್ನೆಲ್ಲಾ ಪರಿಹರಿಸುವನು. ಈ ಅವಕಾಶವನ್ನು ಕಳೆದುಕೊಂಡರೆ ನಂತರ ಸಾಧನೆಗೆ ತುಂಬಾ ಕಷ್ಟವಾಗುವುದು.

ಸಾಧ್ಯವಾದಮಟ್ಟಿಗೆ ನಿನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೆಳಗೆ ಕೊಟ್ಟಿರುವೆನು. ನೀನು ಅವನ್ನು ಸ್ವಲ್ಪವಾದರೂ ಅಭ್ಯಾಸಮಾಡಿದರೆ ನಿಜವಾಗಿಯೂ ಧನ್ಯನಾಗುವೆ. ಎಷ್ಟೋ ನಿನ್ನ ಜೀವನದ ಸಮಸ್ಯೆ ಪರಿಹಾರವಾಗುವುದು.

ಪ್ರಶ್ನೆ: ದಿನಕ್ಕೆ ಎಷ್ಟು ಗಂಟೆ ಜಪ ಮತ್ತು ಧ್ಯಾನದಲ್ಲಿ ಕಳೆಯಬೇಕು. ಪೂಜೆ ಮತ್ತು ಅಧ್ಯಯನದಲ್ಲಿ ಎಷ್ಟು ಗಂಟೆ ಕಳೆಯಬೇಕು.

ಉತ್ತರ; ಇದರಲ್ಲಿ ಎಷ್ಟು ಹೊತ್ತು ಕಾಲಕಳೆಯುವೆಯೋ ಅಷ್ಟೂ ನಿನಗೆ ಒಳ್ಳೆಯದು! ಕೇವಲ ಧ್ಯಾನ ಜೀವನವನ್ನು ನಡೆಸುವವರು ಕನಿಷ್ಟಪಕ್ಷ ದಿನಕ್ಕೆ ಹದಿನಾರು ಗಂಟೆಕಾಲ ಜಪ ಮತ್ತು ಧ್ಯಾನದಲ್ಲಿ ಕಳೆಯಬೇಕು. ಅಭ್ಯಾಸಮಾಡುತ್ತಾ ಕ್ರಮೇಣ ಇದನ್ನು ಹೆಚ್ಚಿಸಬಹುದು. ಮನಸ್ಸು ಅಂತರ್ಮುಖವಾದಷ್ಟೂ ಆನಂದ ಜಾಸ್ತಿ. ಒಂದುಸಲ ಅದರ ಮೇಲೆ ಅಭಿರುಚಿ ಹುಟ್ಟಿದರೆ ಅದರಮೇಲೆ ಆಸಕ್ತಿ ಹೆಚ್ಚುವುದು. ಆಗ ನಿಮ್ಮ ಮನಸ್ಸೆ ಎಷ್ಟುಕಾಲ ಸಾಧನೆಯಲ್ಲಿ ಕಾಲಕಳೆಯಬೇಕೆಂಬುದನ್ನು ಹೇಳುವುದು. ಇಂತಹ ಸ್ಥಿತಿಗೆ ಬರುವುದಕ್ಕೆ ಮುಂಚೆ ದಿನದಲ್ಲಿ ಮೂರನೆ

ಎರಡು ಭಾಗವನ್ನಾದರೂ ಜಪ, ಧ್ಯಾನದಲ್ಲಿ ಕಳೆಯಬೇಕು. ಉಳಿದ ಕಾಲವನ್ನು ಪವಿತ್ರಗಂಥಗಳನ್ನು ಓದುವುದರಲ್ಲಿ, ಧ್ಯಾನದ ಸಮಯದಲ್ಲಿ ಏಳುವ ಆಲೋಚನೆಯನ್ನು ಪರೀಕ್ಷಿಸುವುದರಲ್ಲಿ ಕಳೆಯಬೇಕು. ಒಳ್ಳೆಯ ಮತ್ತು ಕೆಟ್ಟ ಆಲೋಚನೆಯನ್ನು ಬೇರ್ಪಡಿಸಬೇಕು. ಕ್ರಮೇಣ ಎಲ್ಲಾ ಕೆಟ್ಟ ಆಲೋಚನೆಗಳನ್ನೂ ಕಳೆದು ಅದರ ಸ್ಥಳದಲ್ಲಿ ಒಳ್ಳೆಯ ಆಲೋಚನೆಯನ್ನು ಇಡಬೇಕು. ಪುನಃ ಇದನ್ನು ಜೋಪಾನವಾಗಿ, ಜಾಗ್ರತೆಯಿಂದ ಪರೀಕ್ಷಿಸಬೇಕು. ಮನಸ್ಸಿನ ಚಂಚಲತೆಗೆ ಕಾರಣವಾದ ಆಲೋಚನೆಯನ್ನೆಲ್ಲಾ ನಿಗ್ರಹಿಸಿ ಅವುಗಳನ್ನು ಸರಿಯಾದ ದಾರಿಯಲ್ಲಿ ಬಿಡುವುದರಿಂದ ಮನಸ್ಸು ಧ್ಯಾನಸ್ಥಿತಿಗೆ ಬರುವುದು. ಸುಮ್ಮನೆ ಕಣ್ಣುಮುಚ್ಚಿ ಜಪಮಾಡುವುದರಿಂದ ಅಥವಾ ಯಾವಾಗಲಾದರೊಮ್ಮೆ ದೇವರನ್ನು ಚಿಂತಿಸುವುದರಿಂದ ಭಗವದ್ದರ್ಶನ ಲಭಿಸುವುದಿಲ್ಲ.

ನಿತ್ಯಶಾಂತಿ ಮತ್ತು ಆನಂದವನ್ನು ಇಚ್ಛಿಸುವವರು ತೀವ್ರವಾಗಿ ನಿಷ್ಠೆಯಿಂದ ದೇವರನ್ನು ಯೋಚಿಸಬೇಕು. ಮನಸ್ಸನ್ನು ಶಾಂತಮಾಡಬೇಕು. ನಿರ್ಮಲಮಾಡಬೇಕು. ಇದು ಧ್ಯಾನದ ಗುರಿ. ಇದರಲ್ಲಿ ನೀನು ಜಯಶೀಲನಾಗದೆ, ಶಾಂತಿ ಲಭಿಸದೆ ಇದ್ದರೆ, ಧ್ಯಾನದ ಮಾರ್ಗ ಸರಿಯಾಗಿಲ್ಲವೆಂದು ತಿಳಿ. ಮತ್ತೊಂದು ವಿಷಯವನ್ನು ನಿನಗೆ ಒತ್ತಿಹೇಳಬೇಕೆಂದಿರುವೆ. ಅದೇ ಇದು; ನಿನಗೆ ಯಾರು ಊಟ ಮತ್ತ ಸೌಕರ್ಯವನ್ನು ಒದಗಿಸುತ್ತಿರುವರೊ ಅವರು ನಿನ್ನ ಪುಣ್ಯಕ್ಕೆ ಭಾಗಿಗಳು. ಇದನ್ನು ಕೊಟ್ಟಾದಮೇಲೆ ನಿನ್ನ ಪಾಲಿಗೂ ಸ್ವಲ್ಪ ಉಳಿಯುವಷ್ಟನ್ನು ಸಂಪಾದಿಸು.

ಪ್ರಶ್ನೆ : ಕೆಲವುವೇಳೆ ಧ್ಯಾನಮಾಡುವುದಕ್ಕೆ ಆಗದೇ ಇರುವಾಗ ಏನುಮಾಡಬೇಕು? ಯಾವುದಾದರೂ ಒಳ್ಳೆಯ ಪುಸ್ತಕ ಓದುವುದರಲ್ಲಿ ಕಳೆಯಲೆ? ಅಥವಾ ಬಲವಂತದಿಂದ ಧ್ಯಾನಮಾಡಲು ಪ್ರಯತ್ನಿಸಲೆ?

ಉತ್ತರ: ಪ್ರಾರಂಭದಲ್ಲಿ ಧ್ಯಾನಮಾಡುವಂತೆ ಬಲಾತ್ಕರಿಸಬೇಕು. ಇದರಿಂದ ಬಲವಾದ ಅಭ್ಯಾಸವಾಗುವುದು. ಮನಸ್ಸಿನ ಸ್ವಭಾವವೆ ಕೆಲಸ ತಪ್ಪಿಸಿಕೊಳ್ಳುವುದು. ಯಾವಾಗಲೂ ಸುಲಭವಾದುದು ಮತ್ತು ಸೌಖ್ಯವನ್ನೇ ಆಶಿಸುವುದು. ನಿನಗೆ ಶಾಶ್ವತ ಶಾಂತಿ ಸಿಕ್ಕಬೇಕಾದರೆ ಕಷ್ಟಪಡಬೇಕು. ಒಂದೇಸಲ ಬಹಳಕಾಲ ಕುಳಿತುಕೊಳ್ಳಲು ತೊಂದರೆಯಾದರೆ ಹಾಸಿಗೆಯಮೇಲೆ ಮಲಗಿಕೊಂಡು ಜಪಮಾಡು; ನಿದ್ದೆಬಂದರೆ ನಡೆಯುತ್ತಾ ಜಪಮಾಡು. ಹೇಗಾದರೂ ಮನಸ್ಸು ಯಾವಾಗಲೂ ದೇವರ ಆಲೋಚನೆಯಲ್ಲಿರುವಂತೆ ಮಾಡು. ಮನಸ್ಸನ್ನು ಸಡಲಿಸಿದರೆ ದೃಢವಾದ

ಅಭ್ಯಾಸವನ್ನು ರೂಢಿಸಲು ಆಗುವುದಿಲ್ಲ. ಇದಿಲ್ಲದಿದ್ದರೆ ಆಧ್ಯಾತ್ಮಿಕ ಜೀವನವಿಕಾಸ ಸಾಧ್ಯವೇ ಇಲ್ಲ. ಮನಸ್ಸಿನೊಂದಿಗೆ ಸತತ ಹೋರಾಡಿ ಅದಕ್ಕೊಂದು ನಿರ್ದಿಷ್ಟರೂಪು ಕೊಡು. ಇದೇ ಸಾಧನ. ಸಾಧನೆಯ ಗುರಿಯೆ ಮನೋನಿಗ್ರಹ.

ಪ್ರಶ್ನೆ. ಹಠಯೋಗ, ಪ್ರಾಣಾಯಾಮ, ಆಸನ ಮುಂತಾದುವು ನಮ್ಮ ಸಾಧನೆಗೆ ಹೆಚ್ಚು ಕಡಿಮೆ ಆವಶ್ಯಕವೆ? ಇದ್ದರೆ ಇದಕ್ಕೆ ಎಷ್ಟು ಕಾಲವನ್ನು ವಿನಿಯೋಗಿಸಬೇಕು.

ಉತ್ತರ ಸದ್ಯಕ್ಕೆ ಇವು ಯಾವುವೂ ನಿನಗೆ ಆವಶ್ಯಕವಿಲ್ಲ. ಮುಖ್ಯವಾಗಿರುವುದು ಭಗವಂತನನ್ನೇ ಕುರಿತು ಚಿಂತಿಸುವುದು ಮತ್ತು ಹೃತ್ಪೂರ್ವಕ ಅವನನ್ನು ಪ್ರಾರ್ಥಿಸುವುದು. ಯಾವಾಗಲೂ ಅವನೊಂದಿಗೆ ಸಂಬಂಧ ವಿರಬೇಕು. ಈ ನಿಯಮವನ್ನು ಅನುಸರಿಸಲು ಯತ್ನಿಸು. ಯಾವುದು ನಿನಗೆ ಶ್ರೇಯಸ್ಕರವೋ ಅದನ್ನು ನಿನ್ನ ಕೈಯಿಂದ ಮಾಡಿಸುವನು.

ಹಠಯೋಗದ ವಿಚಾರದಲ್ಲಿ, ನೀನು ಅದನ್ನು ಮಾಡಬೇಡ. ಹಾಗೆ ಮಾಡಿದರೆ ಅದರ ಪರಿಣಾಮ ಅಷ್ಟು ಹಿತವಲ್ಲ. ಸರಿಯಾದ ಮಾರ್ಗ ದರ್ಶಕನಿಲ್ಲದೇ ಇದ್ದರೆ ಇದು ಅಪಾಯದ ಮಾರ್ಗ. ಅದನ್ನು ಮಾಡ ಬೇಕೆಂದು ಇಚ್ಛೆ ನಿನಗೆ ತುಂಬಾ ಇದ್ದರೆ, ಯಾರಾದರೂ ಶ್ರೀರಾಮಕೃಷ್ಣರ ಶಿಷ್ಯರು ಸಮೀಪದಲ್ಲಿದ್ದಾಗ ಮಾಡಬಹುದು ಆಗಲೂ ಅವರ ನೇತೃತ್ವ ದಲ್ಲಿ ಅವರ ಸಲಹೆಯಂತೆ ಮಾತ್ರ.

ಪ್ರಶ್ನೆ: ಸಾಧಕ ದಿನಕ್ಕೆ ಎಷ್ಟು ಹೊತ್ತು ನಿದ್ರೆಮಾಡಬೇಕು? ಅವನು ಸಾಧಾರಣ ಮಾಡುವುದರ ಜೊತೆಗೆ ದೇಹ, ಮನಸ್ಸಿಗೆ ವಿಶ್ರಾಂತಿ ಕೊಡುವುದಕ್ಕಾಗಿ ಸ್ವಲ್ಪ ಜಾಸ್ತಿ ನಿದ್ರೆಮಾಡಬಹುದೆ?

ಉತ್ತರ. ಆರೋಗ್ಯವಾಗಿರುವ ಸಾಧಕ ದಿನಕ್ಕೆ ನಾಲ್ಕು ಗಂಟೆ ನಿದ್ರೆಮಾಡಿದರೆ ಸಾಧಾರಣವಾಗಿ ಸಾಕು. ಐದು ಗಂಟೆಗಿಂತ ಹೆಚ್ಚಾಗಿ ನಿದ್ರೆಮಾಡುವುದು ವಿಶ್ರಾಂತಿಯಲ್ಲ. ಅದೊಂದು ರೋಗ. ಇದರಿಂದ ತುಂಬಾ ಕೆಟ್ಟದ್ದು. ಸಾಧಕ ಎಂದಿಗೂ ಕಾಲವನ್ನು ನಿದ್ರೆಯಲ್ಲಿ ವ್ಯಯ ಮಾಡಕೂಡದು. ದೇಹ ಮತ್ತು ಮನಸ್ಸು ದೃಢವಾಗಿರುವ ಯೌವನ ಕಾಲವೇ ಸಾಧನೆಗೆ ಮುಖ್ಯಸಮಯ. ಸಾಧಕ ಇದನ್ನು ಚೆನ್ನಾಗಿ ಉಪ ಯೋಗಿಸಿಕೊಳ್ಳಬೇಕು. ಈಗ ಆಧ್ಯಾತ್ಮಿಕ ಶಕ್ತಿಯನ್ನು ಕೂಡಬೇಕು ಕಡುಕಷ್ಟದಿಂದ ಕೂಡಿರುವ ಪ್ರಪಂಚದಲ್ಲಿ ಶಾಂತಿಸುಖದೆಡೆಗೆ ಸಾಗುತ್ತಿರು ವಾಗ ನಮ್ಮ ಸಹಾಯಕ್ಕೆ ಇದು ಒದಗಬೇಕು. ಈಗ ನೀವು ಆಧ್ಯಾತ್ಮಿಕ

ಜೀವನದಲ್ಲಿ ಮುಂದುವರಿಯದೆ ಹೋದರೆ ನಂತರ ಮಾಡುವುದಕ್ಕೆ ಸಾಧ್ಯವೇ ಇಲ್ಲ. ನೀನಿನ್ನೂ ಸಣ್ಣವನು, ಮಗು. ಈಗ ಮನಸ್ಸಿಗೆ ಚೆನ್ನಾದ ರೂಪು ಕೊಡು. ಸಾಧನೆಯಲ್ಲಿ ತನ್ಮಯರಾಗಿ ಕಾಲವನ್ನು ಉಪಯೋಗಿಸಿಕೊಳ್ಳಿ. ನಂತರ ನಿದ್ರೆಗೆ, ಹರಟೆಗೆ ಬೇಕಾದಷ್ಟು ಸಮಯ ಸಿಕ್ಕುವುದು.

ಸಾಧನೆಮಾಡಿ ಎಂದು ಯಾರಿಗಾದರೂ ಹೇಳಿದರೆ ಇಲ್ಲದ ನೆಪ ವನ್ನೆಲ್ಲಾ ಮುಂದೆ ತರುವರು. ದೇಹ ತುಂಬಾ ದುರ್ಬಲವಾಗಿದೆ. ಅದಕ್ಕೆ ವಿಶ್ರಾಂತಿ ಆವಶ್ಯಕ ಎನ್ನುವರು. ಇದೆಲ್ಲಾ ಅಸತ್ಯ. ಯಾರು ನಿಷ್ಠೆಯಿಂದ ಸಾಧನೆಮಾಡುತ್ತಿರುವರೊ ಮತ್ತು ಯಾರು ಕ್ರಮವಾಗಿ ಜೀವನ ನಡೆಸು ತ್ತಿರುವರೊ ಅವರಿಗೆ, ನಾಲ್ಕುಗಂಟೆ ನಿದ್ರೆ ದೇಹದ ಆರೋಗ್ಯಕ್ಕೆ ಸಾಕಾ ದಷ್ಟು ಆಗುವುದು. ಅಕ್ರಮ ಜೀವನ ನಡೆಸಿ ವೃಥಾ ದೇಹವನ್ನು ದಂಡಿಸು ವರು. ಅಂತಹವರಿಗೆ ಎಂಟುಹತ್ತು ಗಂಟೆ ನಿದ್ರೆಯೂ ಸಾಕಾಗುವುದಿಲ್ಲ. ಅದಕ್ಕೇ ನಾನು ನಿಮಗೆ ಹೇಳುವುದೇನೆಂದರೆ ಮೊದಲು ನಿಮ್ಮ ನಿತ್ಯ ಜೀವನವನ್ನು ಕ್ರಮಗೊಳಿಸಿ. ಆಗ ದೇಹ ಮನಸ್ಸು ಶುದ್ಧವಾಗಿ ಚುರು ಕಾಗುವುದು. ಇನ್ನು ಕಾಲಕಳೆಯಬೇಡಿ. ಭಗವಂತನ ದಯೆಪಡೆಯಲು ತವಕಪಟ್ಟರೆ ಏನನನ್ನಾದರೂ ಮಾಡಿ. ಬರೀ ಹರಟೆ ಮತ್ತು ವೇದಾಂತ ಚರ್ಚೆ ನಿತ್ಯಜೀವನಕ್ಕೆ ಬರದೇ ಇದ್ದರೆ ಏನೂ ಪ್ರಯೋಜನವಿಲ್ಲ.

ಪ್ರ: ಆಹಾರದ ವಿಷಯದಲ್ಲಿ ಯಾವ ನಿಯಮವನ್ನು ಅನುಸರಿಸ ಬೇಕು? ಯಾರು ಏನನ್ನು ಕೊಟ್ಟರೆ ಅದನ್ನು ಸ್ವೀಕರಿಸಲೆ? ಅಥವಾ ಅದರಲ್ಲಿ ಯಾವುದನ್ನಾದರೂ ಬಿಡಲೆ? ಭಿಕ್ಷಾನ್ನವೊ ಅಥವಾ ಸಮಯಕ್ಕೆ ದೊರೆತ ಯಾವುದಾದರೂ ಆಹಾರವೊ?

ಉತ್ತರ: ಸಾಧನೆಮಾಡುವಾಗ ಆಹಾರದ ವಿಷಯದಲ್ಲಿ ಸ್ವಲ್ಪ ವಿವೇಚನೆ ಒಳ್ಳೆಯದು. ಕೆಲವು ಆಹಾರ ನಿದ್ರೆ ಆಲಸ್ಯ ಮುಂತಾದುವನ್ನು ಹುಟ್ಟಿಸುವುವು. ಅವು ಸಾಧನೆಗೆ ಕೆಟ್ಟದ್ದು. ಅವನ್ನು ತೆಗೆದುಕೊಳ್ಳದೇ ಇರುವುದೇ ಒಳ್ಳೆಯದು. ಹೆಚ್ಚು ಸಿಹಿ ಮತ್ತು ಹುಳಿ ಉದ್ದಿನಿಂದ ಮಾಡಿದ ಪದಾರ್ಥ ಹೆಚ್ಚಾಗಿ ತಿಂದರೆ ಅದೂ ಕೆಟ್ಟದ್ದು. ಇಂತಹ ಆಹಾರ ತಮಸ್ಸನ್ನು ಪ್ರಚೋದಿಸುವುದು. ಇದರಿಂದ ಧ್ಯಾನಮಾಡುವಾಗ ತೂಕಡಿಕೆ ಬರುವುದು. ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯುವುದಿಲ್ಲ.

ಸಾಧಕ ಆಹಾರದಲ್ಲಿ ತುಂಬಾ ಜೋಪಾನವಾಗಿರಬೇಕು. ಸುಲಭ ವಾಗಿ ಜೀರ್ಣವಾಗುವ ಆಹಾರವನ್ನು ಮಾತ್ರ ತೆಗೆದುಕೊಳ್ಳಬೇಕು.

ಯಾವಾಗಲೂ ಮೂರನೆ ಎರಡು ಭಾಗಕ್ಕಿಂತ ಹೆಚ್ಚು ಹೊಟ್ಟೆಗೆ ತುಂಬಬಾರದು. ಇದರಿಂದ ಅವನ ಶಕ್ತಿ ಮತ್ತು ವೀರ್ಯ ಹೆಚ್ಚಾಗಿ ಅದನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಬಹುದು. ಇದಲ್ಲದೆ ಹೆಚ್ಚು ಹೊಟ್ಟೆ ತುಂಬಾ ತಿಂದರೆ ಶಕ್ತಿಯನ್ನೆಲ್ಲಾ ಅದನ್ನು ಅರಗಿಸಿಕೊಳ್ಳುವುದರಲ್ಲೇ ವ್ಯಯವಾಗುವುದು. ಧ್ಯಾನಕ್ಕೆ ಮನಸ್ಸೂ ಇರುವುದಿಲ್ಲ. ಕಾಲವೂ ಇರುವುದಿಲ್ಲ. ಇದರಿಂದ ಆರೋಗ್ಯಕ್ಕೂ ಕೇಡು. ಸಾಧನೆಗೆ ಒಳ್ಳೆಯ ಆರೋಗ್ಯ ಅತ್ಯಾವಶ್ಯಕ. ಎಲ್ಲಾ ನಿನಗೆ ಅನುಕೂಲವಾಗಿರುವಾಗ ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊ.

ಭಿಕ್ಷಾನ್ನ ಶುದ್ಧ ಆಹಾರ. ಇದರಿಂದ ನೀನು ಯಾರ ದಾಕ್ಷಿಣ್ಯಕ್ಕೂ ಬೀಳುವುದಿಲ್ಲ. ಯಾರಾದರೂ ಒಬ್ಬರಿಂದ ನೀನು ಆಹಾರವನ್ನು ಸ್ವೀಕರಿಸಿದರೆ ದಾಕ್ಷಿಣ್ಯಕ್ಕೆ ಒಳಗಾಗಬೇಕಾಗುವುದು. ನಿನ್ನ ಪುಣ್ಯದ ಅಂಶ ಅವನಿಗೂ ಹೋಗುವುದು. ಯಾರಿಗೆ ನಿರಂತರ ಧ್ಯಾನ ಸಾಧ್ಯವಿಲ್ಲವೊ, ಯಾರಿಗೆ ಮನಸ್ಸು ಸ್ವಲ್ಪ ಹಗುರವಾಗಬೇಕೊ, ಅಂತಹವರಿಗೆ ಭಿಕ್ಷಾನ್ನ ಒಳ್ಳೆಯದು. ಕಾಲವನ್ನು ಕಾಡುಹರಟೆಯಲ್ಲಿ ಕಳೆಯುವುದಕ್ಕಿಂತ ಭಿಕ್ಷಾನ್ನ ಸಂಗ್ರಹಿಸುವುದರಲ್ಲಿ ಕಳೆದರೆ ಕಾಲ ವ್ಯಥಾವ್ಯರ್ಥವೂ ಆಗುವುದಿಲ್ಲ; ಮತ್ತೊಬ್ಬರಿಂದ ದಾನವನ್ನು ಸ್ವೀಕರಿಸಿದಾಗ ಅವರಿಗೆ ಕೊಡುವಂತೆ ಪುಣ್ಯವನ್ನೂ ಕೊಡಬೇಕಾಗಿಲ್ಲ.

ಪ್ರಶ್ನೆ : ಸಾಧನೆಮಾಡುವಾಗ ಮೌನ ಆವಶ್ಯಕವೆ? ಹಾಗಾದರೆ ಕೆಲವು ವೇಳೆ ಮೌನವನ್ನು ಆಚರಿಸಲು ಸಾಧ್ಯವಿಲ್ಲದೇ ಇದ್ದರೆ ಅಥವಾ ಇದರಿಂದ ಮನಸ್ಸೇ ಕ್ಷೋಭೆಗೆ ಒಳಗಾದರೆ ಏನುಮಾಡಬೇಕು.

ಉತ್ತರ. ನೀನು ತಿಳಿದುಕೊಂಡಿರುವಂತೆ ಮೌನವೇನೂ ಆವಶ್ಯಕವಿಲ್ಲ. ಬಲಾತ್ಕಾರದ ಮೌನ ಅಥವಾ ಕಾಡುಹರಟೆ ಎರಡರಿಂದಲೂ ಮನಸ್ಸಿಗೆ ಕೇಡು. ಮನೋಮೌನ ಮಾತಿನ ಮೌನಕ್ಕಿಂತ ಒಳ್ಳೆಯದು. ಮನೋಮೌನವನ್ನು ಅಭ್ಯಾಸಮಾಡು. ಬಲಾತ್ಕಾರವಾಗಿ ಮೌನವಾಗಿರುವುದಕ್ಕಿಂತ ಎಷ್ಟು ಬೇಕೊ ಅಷ್ಟನ್ನು ಮಾತ್ರ ಮಾತನಾಡಿದರೆ ಮೌನದಷ್ಟೇ ಫಲ ಬರುವುದು.

ಪ್ರಶ್ನೆ ಸಾಧಕನಿಗೆ ಎಷ್ಟು ಬಟ್ಟೆ ಬೇಕು? ಎಷ್ಟು ಮಟ್ಟಿಗೆ ಶೀತೋಷ್ಣಗಳನ್ನು ತಡೆಯಬೇಕು. ಯಾರಾದರೂ ಚಳಿಬಿಸಿಲಿನ ತಾಪದಿಂದ ಪಾರಾಗುವುದಕ್ಕೆ ಬಟ್ಟೆ ಕೊಟ್ಟರೆ ಅದನ್ನು ಸ್ವೀಕರಿಸಬಹುದೆ?

ಉತ್ತರ: ಶೀತೋಷ್ಣಗಳಿಂದ ಪಾರಾಗುವುದಕ್ಕೆ ಎಷ್ಟು ಆವಶ್ಯ

ಕವೋ ಅಷ್ಟು ಬಟ್ಟೆ ಸಾಕು. ಸೂಕ್ಷ್ಮದೇಹದವರು ಕಷ್ಟ ತಪಸ್ಸನ್ನು ಮಾಡಿದರೆ ಅದರ ಪರಿಣಾಮವನ್ನು ಅನುಭವಿಸಬೇಕಾಗುವುದು. ನಿಮ್ಮ ಗುರಿ ದೇವರನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದು. ಸುಮ್ಮನೆ ಕಷ್ಟ ವನ್ನು ಅನುಭವಿಸುವುದಲ್ಲ. ದಾನ ಸ್ವೀಕಾರಮಾಡುವುದರಲ್ಲಿ ಅದು ನಿಮಗೆ ಅತ್ಯಾವಶ್ಯಕವೆ ಅದನ್ನು ನೋಡಿ. ನಿಮಗೆ ಅತ್ಯಾವಶ್ಯಕವಾಗಿ ದ್ದರೆ ಸ್ವೀಕರಿಸಿ. ಇಲ್ಲದೇ ಇದ್ದರೆ ನಿರಾಕರಿಸಿ. ಸುಮ್ಮನೆ ಕೂಡಿಹಾಕು ವುದಕ್ಕೆ ಯಾರೇನು ಕೊಟ್ಟರೆ ಅದನ್ನು ತೆಗೆದುಕೊಳ್ಳುವುದು ಸಾಧಕನಿಗೆ ಅಕ್ಷಮ್ಯ ಪಾಪ.

ಪ್ರಶ್ನೆ : ಪೂಜ್ಯಪಾದರಾದ ನೀವು ಮತ್ತು ಭಗವಂತ ನನ್ನನ್ನು ಕರುಣಿಸುವನೆಂಬುದು ನನಗೆ ಗೊತ್ತಿದೆ. ಅದನ್ನು ಯೋಗ್ಯರೀತಿಯಲ್ಲಿ ಉಪಯೋಗಿಸಿಕೊಳ್ಳುವಂತೆ ನನಗೆ ಆಶೀರ್ವದಿಸಿ. ನನಗೆ ನಿಮ್ಮ ಮೇಲಿ ರುವ ಭಕ್ತಿ, ಶ್ರದ್ಧೆ, ಅಚಲವಾಗಿರಲಿ ಎಂದು ಆಶೀರ್ವದಿಸಿ. ನಿಮ್ಮ ಸಹಾಯವಿಲ್ಲದೆ ನನಗೆ ಏನು ಮಾಡುವುದಕ್ಕೆ ಶಕ್ತಿ ಇಲ್ಲದೇ ಇರುವುದರಿಂದ ನಿಮ್ಮ ಇಚ್ಛೆಯಂತೆ ನಾನು ನಡೆಯುವಂತೆ ಮಾಡಲಾರಿರಾ?

ಉತ್ತರ: ಅಂತಹ ಶಕ್ತಿ ನಿನ್ನಲ್ಲಿದೆ. ಮಗು, ಎಂದಿಗೂ ಆತ್ಮಶ್ರದ್ಧೆ ಯನ್ನು ಕಳೆದುಕೊಳ್ಳಬೇಡ. ದೇವರು ನಿನ್ನಲ್ಲಿರುವನು. ಅವನಕರುಣೆಯೂ ನಿನ್ನ ಮೇಲಿರುವುದು. ಭಗವಂತ ಕರುಣಾಮಯ. ಎಲ್ಲರಮೇಲೂ ಇರುವ ಅವನ ಅಪಾರ ಕರುಣೆಯಿಂದ ಮಾತ್ರ ನೀನು ರಾಮಕೃಷ್ಣಸಂಘದ ಆಶ್ರಯದಲ್ಲಿರುವೆ. ಅವರ ದಯೆಯಿಂದಲೇ ನಿನ್ನ ಸಾಧನೆಯಕಾಲದಲ್ಲಿ ಆಹಾರ ಬಟ್ಟೆಯನ್ನು ಒದಗಿಸಲು ಒಬ್ಬ ಯೋಗ್ಯ ಗೃಹಸ್ಥ ಸಿಕ್ಕಿರುವನು. ಭಗವಂತನಲ್ಲಿ ಅಚಲ ಶ್ರದ್ಧೆ ಇರಲಿ, ಸ್ಥಿರಸಂಕಲ್ಪದಿಂದ ಕಾರ್ಯೋನ್ಮುಖ ನಾಗು. ಭಗವಂತ ಎಲ್ಲಾ ಜ್ಞಾನವನ್ನೂ ಕರುಣಿಸುವನು. ಬಿಡದೆ ಪ್ರಯತ್ನ ಪಡು. ಅವನ ದರ್ಶನ ಪಡೆವೆ. ಅಪಾರಕರುಣೆಯನ್ನು ಹೊಂದುವೆ. ವೃಥಾ ಕಾಲಹರಣ ಮಾಡಬೇಡ. ಶ್ರೀರಾಮಕೃಷ್ಣರ ಶಿಷ್ಯರ ಸಲಹೆ ಯಂತೆ ಸಾಧನೆಮಾಡು. ಈ ಜನ್ಮದಲ್ಲೇ ಅವನನ್ನು ಪಡೆಯುವವರೆಗೂ ನಿಲ್ಲಬೇಡ. ಸುಮ್ಮನೆ ದೊಡ್ಡದೊಡ್ಡ ಪ್ರಶ್ನೆಗಳನ್ನು ಕುರಿತು ಆಲೋಚಿಸಬೇಡ. ಪ್ರತ್ಯಕ್ಷವಾಗಿ ಏನಾದರೂ ಮಾಡು. ಈ ಅವಕಾಶವನ್ನು ಚೆನ್ನಾಗಿ ಉಪಯೋಗಿಸಿಕೊಂಡು ಧನ್ಯನಾಗು.

ನಿನ್ನ ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳಿದ್ದಾಯಿತು. ಈಗ ಜೀವನ ದಲ್ಲಿ ಅದನ್ನು ಅನುಷ್ಠಾನಕ್ಕೆ ತರಲು ಯತ್ನಿಸು. ನಿನಗೆ ಊಟ, ವಸತಿ

ಕೊಡುತ್ತಿರುವ ಭದ್ರಮನುಷ್ಯ ಭಕ್ತನೆಂದು ಕೇಳಿದೆ. ಶ್ರೀಮಂತರು ಒಳ್ಳೆಯ ಕೆಲಸಕ್ಕೆ ಹಣ ಖರ್ಚುಮಾಡುವುದು ಅಪರೂಪ. ಹಾಗೆ ಮಾಡುವವರು ಬಹಳ ಅಪರೂಪ. ಆತ ನಿನಗೆ ಇಷ್ಟೊಂದು ಮಾಡುತ್ತಿರುವನು. ಆತನ ಹಣ ವ್ಯರ್ಥವಾಗದಂತೆ ನೋಡಿಕೊ. ನಿನ್ನನ್ನು ನೋಡಿ ಆತನ ಧಾರ್ಮಿಕಪ್ರವೃತ್ತಿ ಹೆಚ್ಚಾಗುವಂತಹ ಸ್ಥಿತಿಯಲ್ಲಿ ನೀನು ಇರಬೇಕು. ನಿನ್ನ ಪುಣ್ಯಪಾಪಗಳಲ್ಲಿ ನಿನಗೆ ಸಹಾಯಮಾಡುವವನೂ ಪಾಲುದಾರನಾದುದರಿಂದ ಅವನಿಗೆ ಒಳ್ಳೆಯದಾಗುವ ಕೆಲಸವನ್ನು ಮಾತ್ರ ಮಾಡು. ಜೋಪಾನವಾಗಿರು. ಹೆಸರು, ಕೀರ್ತಿ, ಆಸೆಗೆ ಮರುಳಾಗಬೇಡ. ಮನೆಯಲ್ಲಿ ಇವನ್ನು ಬೇಕಾದಷ್ಟು ಪಡೆಯಬಹುದಾಗಿತ್ತು. ಒಮ್ಮೆ ಅದರಿಂದ ಪಾರಾಗಿ ಬಂದಮೇಲೆ ಪುನಃ ಅದರ ಬಲೆಗೆ ಬೀಳಬೇಡ. ಸ್ವಲ್ಪವೂ ಕೀರ್ತಿ ಮತ್ತು ಹೆಸರಿನ ಆಸೆಯಿಂದ ನಿನ್ನ ಮನಸ್ಸು ಮಲಿನವಾಗದೆ ಇರಲಿ ಎಂದು ಭಗವಂತನನ್ನು ಪ್ರಾರ್ಥಿಸು.

ನಿನಗೆ ಮತ್ತು ನಿನಗೆ ಸಹಾಯಮಾಡುತ್ತಿರುವ ಸ್ನೇಹಿತನಿಗೆ ನನ್ನ ಆಶೀರ್ವಾದಗಳು. ನಿನ್ನ ಇಚ್ಛೆ ಪೂರ್ಣವಾಗಲೆಂದು ನಾನು ಯಾವಾಗಲೂ ಭಗವಂತನನ್ನು ಪ್ರಾರ್ಥಿಸುವೆ. ಅವನು ನಿನಗೆ ಸುಬುದ್ಧಿಯನ್ನು ಕರುಣಿಸಿ ಯೋಗ್ಯನನ್ನಾಗಿ ಮಾಡಲಿ.

## ೩೪
## ಪತ್ರ

ಪ್ರಿಯ ಅ-

ನಿನ್ನ ಮತ್ತು ಒ-ಪತ್ರ ತಲುಪಿತು. ಅವನ ಉದ್ದೇಶ ಸ್ಪಷ್ಟವಾಗಿಲ್ಲ ಅವನಿಗೆ ಮದುವೆಮಾಡಿಕೊಳ್ಳುವುದಕ್ಕೆ ಇಷ್ಟವಿಲ್ಲ. ದೇಶಸೇವೆ ಮಾಡಬೇಕೆಂದು ಇಚ್ಛೆ. ಅದೇನೊ ಒಳ್ಳೆಯದೆ. ಇದಕ್ಕೆಲ್ಲಾ ಕಾರಣ ಪಾಶ್ಚಾತ್ಯ ವಿದ್ಯೆಯನ್ನು ಸರಿಯಾಗಿ ಜೀರ್ಣಿಸಿಕೊಳ್ಳದೆಇರುವುದು ಎಂದು ತೋರುವುದು. ಒಬ್ಬನ ಶೀಲ ಪರಿಶುದ್ಧವಾದ ಹೊರತು ಇತರರನ್ನು ಮತ್ತು ದೇಶವನ್ನು ಹೇಗೆ ಸೇವಿಸುತ್ತಾನೆಯೊ ತಿಳಿಯದು. ಯಾರು ತಮ್ಮ ಸಮಸ್ಯೆಯನ್ನೇ ಬಗೆಹರಿಸಲಾರರೋ ಅವರಿಂದ ಇತರರಿಗೆ ಅಷ್ಟು ಸಹಾಯವಾಗಲಾರದು. ಇದೇ ನನ್ನ ಅಭಿಪ್ರಾಯ. ಹೇಗಾದರೂ ಆಗಲಿ ಹುಡುಗ ಒಳ್ಳೆಯವನು ಶುದ್ಧ ಜೀವನವನ್ನು ನಡೆಸಿದರೆ ಆಧ್ಯಾತ್ಮ ಜೀವನದಮೇಲೆ ಅಭಿರುಚಿ ಹುಟ್ಟುವುದು.

ದೇವರನ್ನು ಬಿಗಿಯಾಗಿ ಹಿಡಿದುಕೊಂಡು ಪ್ರಪಂಚದ ಕೆಲಸಗಳನ್ನು

ಮಾಡಿ. ಆಗ ಎಲ್ಲಾ ಅಪಾಯದಿಂದ ಪಾರಾಗುವಿರಿ ಎಂದು ಶ್ರೀರಾಮ ಕೃಷ್ಣರು ಹೇಳುತ್ತಿದ್ದರು. ಕಣ್ಣಾಮುಚ್ಚಾಲೆ ಆಟದಲ್ಲಿ ಯಾರು ಅಡು ಗೂಲಜ್ಜಿಯನ್ನು ಮುಟ್ಟುತ್ತಾನೆಯೋ ಅವನು ಕಳ್ಳನಲ್ಲ. ಹಾಗೆಯೇ ಒಮ್ಮೆ ದೇವರನ್ನು ಕಂಡರೆ ಪುನಃ ಪ್ರಾಪಂಚಿಕ ಬಂಧನಕ್ಕೆ ಬೀಳುವುದಿಲ್ಲ ಎಂದು ಅವರು ಹೇಳುತ್ತಿದ್ದರು.

ಜೀವನದ ಗುರಿ ಭಗವಂತನ ಸಾಕ್ಷಾತ್ಕಾರ ಎಂಬುದನ್ನು ಯಾವಾ ಗಲೂ ನೆನಪಿನಲ್ಲಿಡು. ಮೊದಲು ಅವನನ್ನು ನೋಡಬೇಕು. ಅವನ ಪಾದ ಕಮಲಗಳಮೇಲೆ ಭಕ್ತಿ, ಶ್ರದ್ಧೆ ದೃಢವಾಗಿರಲಿ ನಂತರ ನಿಮಗೆ ತೋರಿ ದುದನ್ನು ಮಾಡಬಹುದು. ಎಲ್ಲಿಯವರೆವಿಗೂ ನೀವು ಇರುತ್ತೀರೊ ಅಲ್ಲಿಯವರೆವಿಗೂ ಏನಾದರೂ ಕೆಲಸವನ್ನು ಮಾಡಲೇಬೇಕು. ನಿನ್ನ ಜೀವನಕ್ಕೆ ಕಷ್ಟವಿಲ್ಲದೇ ಇದ್ದರೂ ನಿನ್ನ ದೇಹಕ್ಕೋಸುಗವೋ, ಅಥವಾ ಹಿಂದಿನ ಸಂಸ್ಕಾರಗಳ ಪ್ರಭಾವದಿಂದಲೋ ನೀನು ಏನನ್ನಾದರೂ ಮಾಡುವೆ. ನೀನು ಕೆಲಸಮಾಡಲೇಬೇಕಾಗಿರುವಾಗ ಯಾವುದು ನಿನಗೆ ಶಾಂತಿ ನೀಡುವುದೋ, ಯಾವುದರಿಂದ ಇತರರಿಗೆ ಸಹಾಯವಾಗುವುದೋ ಅಂತಹ ಕೆಲಸವನ್ನು ಮಾಡುವುದು ಒಳ್ಳೆಯದು. ಯಾರು ಅವರ ಪಾದ ದಡಿ ಆಶ್ರಯ ಪಡೆದರುವರೋ, ಯಾರು ಅವರ ಕೃಪೆಯನ್ನು ಪಡೆದಿರು ವರೋ ಅವರೆಂದಿಗೂ ತಪ್ಪುಮಾಡುವುದಿಲ್ಲ. ಅವರು ಆಡಿದ ಪ್ರತಿಯೊಂದು ಮಾತು, ಮಾಡಿದ ಪ್ರತಿಯೊಂದು ಕೆಲಸ ಎಲ್ಲಾ ಮಾನವಕೋಟಿಯ ಹಿತಕ್ಕಾಗಿ.

ಮದುವೆಯಾಗದೆ ಇರುವುದು ಒಳ್ಳೆಯದು. ಯಾರು ಬ್ರಹ್ಮಚಾರಿ ಗಳಾಗಿರುವರೋ ಅವರಿಗೆ ಅದ್ಭುತಶಕ್ತಿ ಬರುವುದು. ಅಂತಹವರ ಮೂಲಕ ಮಾತ್ರ ಅತೀಂದ್ರಿಯ ಅಥವಾ ಭಗವಂತನ ಶಕ್ತಿ ವ್ಯಕ್ತವಾಗುವುದು. ಭಗವಂತನ ಹೃದಯವೇ ಭಗವಂತನಿರುವ ಕೋಣೆ. ನಾವು ಭಗವಂತನ ಭಕ್ತರು; ಸೇವಕರು ಆಗಬೇಕಾದರೆ ಪರಿಶುದ್ಧರಾಗಬೇಕು. ಅವನು ಪರಿಶುದ್ಧ ಹೃದಯದಲ್ಲಿ ಮಾತ್ರ ವಾಸಿಸುವನು. ಅಪರಿಶುದ್ಧರ ಮೇರೆಗೆ ಮೀರಿರುವನು. ನಿನ್ನ ಮನಸ್ಸು ಮತ್ತು ಹೃದಯ ಗಾಜಿನಂತೆ ಶುದ್ಧ ವಾದಾಗ ಮಾತ್ರ ಭಗವಂತ ನಿನ್ನ ಹೃದಯದಲ್ಲಿ ನೆಲಸುವನು. ಆಗಮಾತ್ರ ನೀನು ಅವನ ಸೇವಕ, ಭಕ್ತ, ಆಶ್ರಿತ ಅಥವಾ ಮಗು. ಹೇಗೆ ಶುಭ್ರ ವಾದ ಕನ್ನಡಿ ಒಳ್ಳೆಯ ಪ್ರತಿಬಿಂಬವನ್ನು ಕೊಡಬಲ್ಲುದೊ ಹಾಗೆಯೇ ಪರಿಶುದ್ಧ ಹೃದಯ ಭಗವಂತನನ್ನು ಚೆನ್ನಾಗಿ ಪ್ರತಿಬಿಂಬಿಸುವುದು.

ಯಾರು ಇನ್ನೂ ಹುಡುಗರಾಗಿರುವರೋ ನಿರ್ಮಲವಾಗಿರುವರೋ ಅವರು ಅಲ್ಲಿ ಭಗವಂತನನ್ನು ಪ್ರತಿಷ್ಠೆಮಾಡಿ, ಮತ್ತಾವುದಕ್ಕೂ ಅವಕಾಶ ಕೊಡ ಬೇಡಿ. ಪರಿಶುದ್ಧಜೀವನದಿಂದ ಅಲ್ಲದೆ ಮತ್ತಾವುದರಿಂದಲೂ ಅವನನ್ನು ತಿಳಿದುಕೊಳ್ಳಲಾರೆವು.

ಹುಡುಗ ಒಳ್ಳೆಯವನು. ಶುಭಚಿಹ್ನೆಗಳಿವೆ. ಪ್ರಯತ್ನಪಟ್ಟರೆ ಆಧ್ಯಾತ್ಮಿಕಜೀವನದಲ್ಲಿ ಅವನು ಮುಂದುವರಿಯಬಹುದು ಬಿ.ಎ.,ಎಂ.ಎ ಪಾಸುಮಾಡುವುದು, ಲಾಯರಾಗಿ ಹಣಸಂಪಾದನೆಮಾಡಿದರೆ, ತಾತ್ಕಾಲಿಕ ಸುಖ ಕೊಡುವುದು. ಇದೇನೂ ಜೀವನದಲ್ಲಿ ಘನ ಆದರ್ಶವಲ್ಲ. ಜೀವ ನದ ಗುರಿಯಾದ ಭಗವಂತನನ್ನು ಹೊಂದುವುದಕ್ಕೆ ಇದರಿಂದ ಪ್ರಯೋಜನ ವಿಲ್ಲ. ಮೊದಲು ನಿನ್ನ ನಡತೆಯನ್ನು ತಿದ್ದಿಕೊ ಅದು ಕಳಂಕರಹಿತ ವಾಗಲಿ. ನಂತರ ನೀನು ಯಾವುದನ್ನು ಕೈಹಿಡಿದರೂ ಸುಲಭವಾಗಿ ಅದನ್ನು ಮಾಡಬಹುದು. ಬಿ. ಎ., ಎಂ. ಎ. ಪಾಸು ಮಾಡುವುದಕ್ಕೆ ವ್ಯರ್ಥಮಾಡಿದ ಕಾಲದಲ್ಲಿ ಇಪ್ಪತ್ತನೇ ಒಂದು ಭಾಗವನ್ನಾದರೂ ಧಾರ್ಮಿಕ ಪುಸ್ತಕಗಳನ್ನೋದುವುದರಲ್ಲಿ ಕಳೆದಿದ್ದರೆ ಉತ್ತಮಜೀವನದ ಎಷ್ಟೋ ವಿಷಯಗಳನ್ನು ತಿಳಿದುಕೊಳ್ಳಬಹುದಾಗಿತ್ತು. ವಿದ್ಯಾರ್ಥಿಗಳಿಗೆ ಯಾವು ದಾದರೂ ಧಾರ್ಮಿಕ ಪುಸ್ತಕಗಳನ್ನೋದಿ ಎಂದರೆ ಕಾಲವಿಲ್ಲವೆನ್ನುವರು. ಮಗು, ನೀನು ಮನುಷ್ಯನಾಗಿ ನಿತ್ಯಾನಂದದಲ್ಲಿ ತಲ್ಲೀನನಾಗಬೇಕೆಂದು ಇಚ್ಛಿಸಿದರೆ ಗಾಢಧ್ಯಾನದಲ್ಲಿ ತಲ್ಲೀನನಾಗಿ ಭಗವಂತನನ್ನು ಪಡೆಯಲು ಅಥವಾ ಪ್ರಯತ್ನದಲ್ಲಿ ಮರಣವನ್ನಾದರೂ ಎದುರಿಸಲು ಯತ್ನಿಸು.

ಯಾರಿಗೆ ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆ ಇದೆಯೋ ಅವರು ಬಿ. ಎ., ಎಂ. ಎ. ಗಳಾಗಲಿ. ಆದರೆ ಯಾರು ಸಚ್ಚಿದಾನಂದ ವನ್ನು ಬಯಸುತ್ತಾರೆಯೋ ಅವರಿಗೆ ಈ ಡಿಗ್ರಿಗಳಿಂದ ಪ್ರಯೋಜವಿಲ್ಲ. ಶ್ರೀರಾಮಕೃಷ್ಣರು ಗ್ರಂಥವನ್ನು ಗ್ರಂಥಿ ಎಂದು ಕರೆಯುತ್ತಿದ್ದರು. ಆದರೆ ಇದರಲ್ಲಿ ಶಾಸ್ತ್ರಗಳು, ಸ್ವಾಮಿ ವಿವೇಕಾನಂದರ ಕೃತಿಗಳು ಮುಂತಾದುವು ಸೇರಿಲ್ಲ. ಕೇವಲ ಲೌಕಿಕಗ್ರಂಥಗಳನ್ನು ಓದಿದರೆ ಅಹಂಕಾರ ಬರುವುದು ಅವರಲ್ಲಿ ಹೀನ ಗುಣಗಳನ್ನು ಪ್ರಚೋದಿಸುವುದು, ದೇವರಿಂದ ವಿಮುಖ ರನ್ನಾಗಿ ಮಾಡುವುದು. ಯಾವ ಪುಸ್ತಕವಾಗಲಿ ದೇವರಮೇಲೆ ಭಕ್ತಿ,ಶ್ರದ್ಧೆ ಗಳನ್ನುಹುಟ್ಟಿಸುವುದಿಲ್ಲವೋ ಅದು ತಾತ್ಕಾಲಿಕವಾಗಿ ಎಷ್ಟೋ ಮನೋ ರಂಜಕವಾಗಿದ್ದರೂ ಕೊನೆಗೆ ದುಃಖವನ್ನು ತರುವುದು ಬಿ. ಎ., ಎಂ. ಎ. ಡಿಗ್ರಿಗಳಿಂದ ಬರುವ ಅಹಂಕಾರ ದೇವರಿಂದ ವಿಮುಖರನ್ನಾಗಿ ಮಾಡು

ವುದು. ಐಶ್ವರ್ಯವೂ ಇಂತಹ ಅಪಾಯಕ್ಕೆ ದಾರಿ. ಹಣದಿಂದ ಒಳ್ಳೆಯ ದಕ್ಕಿಂತ ಹಾನಿಯೇ ಹೆಚ್ಚು.

ಜಾಗ್ರತಾವಸ್ಥೆಯಲ್ಲಿ ಆಗಲಿ, ಮಲಗಿರುವಾಗ ಆಗಲಿ ಶ್ರೀರಾಮ ಕೃಷ್ಣರು ಒಂದು ನಾಣ್ಯವನ್ನೂ ಮುಟ್ಟುತ್ತಿರಲಿಲ್ಲ. ಅವರು ತಮ್ಮ ಜೀವನದಿಂದಲೇ ಕಲಿಸಿರುವುದೇನೆಂದರೆ ಭಗವಂತನ ದರ್ಶನಕ್ಕೆ ತ್ಯಾಗ ವಿಲ್ಲದೇ ಬೇರೆ ಮಾರ್ಗವೇ ಇಲ್ಲ. ವಿಷಯಸುಖಗಳನ್ನು ಅರಸಿಕೊಂಡು ಹೋದರೆ ಮನುಷ್ಯ ಮೃಗವಾಗುವನು. ನೀನು ಮನುಷ್ಯನಾಗಬೇಕಾ ದರೆ ತ್ಯಾಗವನ್ನು ಅಭ್ಯಾಸಮಾಡು. ಪ್ರೀತಿಸಿ ಅವನನ್ನು ಪಡೆ. ಕ್ಷಣಿಕ ಸುಖವನ್ನು ತ್ಯಜಿಸಿದರೆ ಮಾತ್ರ ಶಾಶ್ವತಸುಖವನ್ನು ಪಡೆಯಲು ಯೋಗ್ಯ ನಾಗುವೆ. ತ್ಯಾಗವೆಂದರೆ ಎಲ್ಲಾ ಇಂದ್ರಿಯಸುಖವನ್ನು ಈ ಜೀವನದಲ್ಲಿ ತ್ಯಜಿಸುವುದು ಎಂದು ಅರ್ಥ. ಭಗವಂತನ ಪಾದಕಮಲಗಳಲ್ಲಿ ಶರಣು ಹೊಂದು. ಭಕ್ತಿ ಪ್ರೇಮದಿಂದ ಉನ್ಮತ್ತನಾಗು. ಶ್ರೀರಾಮಕೃಷ್ಣರ ಜೀವನವನ್ನು ನೋಡು. ಯೋಗ್ಯರೀತಿಯಲ್ಲಿ ಮನುಷ್ಯನಾಗು.

ತ್ಯಾಗ ಒಂದೇ ನಿನಗೆ ಶಾಂತಿ ನೀಡಬಲ್ಲುದು. ಸರ್ವವನ್ನೂ ಆತನಿ ಗಾಗಿ ತ್ಯಜಿಸು. ದೇವರನ್ನು ನಿನ್ನವನನ್ನಾಗಿ ಮಾಡಿಕೊ. "ನೀನೇ ನನ್ನ ತಂದೆ, ತಾಯಿ, ಸಹೋದರ, ಸಹೋದರಿ ನನ್ನ ಸರ್ವಸ್ವ" ಎಂದು ಪ್ರಾರ್ಥಿಸು. ಈ ಜೀವನದಲ್ಲಿ ಎಲ್ಲಾ ಭೋಗೇಚ್ಛೆಯ ಆಸೆಯನ್ನೂ ತೊರೆದು, ಹಗಲು ರಾತ್ರಿ ಅವನ ಚಿಂತನೆಯಲ್ಲಿ, ಅವನ ಪ್ರಾರ್ಥನೆಯಲ್ಲಿ ಕಾಲ ಕಳೆದರೆ, ಅನಂತಾನಂದವನ್ನು ಅನುಭವಿಸಿ ಯೋಗ್ಯಮನುಷ್ಯ ನಾಗುವೆ. ಈ ಆನಂದವನ್ನು ಮಾತಿನ ಮೂಲಕ ವಿವರಿಸಲಾಗುವುದಿಲ್ಲ. ಅದನ್ನು ಹುದುಗಿಸಲು ಮಾನವಹೃದಯ ಬಹಳ ಕಿರಿದು. ಆ ಆನಂದ ವನ್ನು ಪಡೆದಮೇಲೆ ಅವನ ಕೃಪೆ, ಪ್ರೇಮ ಮತ್ತು ಅವನಿರವನ್ನು ಯಾವಾಗಲೂ ನೀನು ಅನುಭವಿಸುವೆ.

ಭಗವತ್ಸಾಕ್ಷಾತ್ಕಾರಕ್ಕೆ ಮೂರು ಆವಶ್ಯಕ. ಮಾನವಜನ್ಮ, ಮುಮುಕ್ಷುತ್ವ, ಸಾಧುಸಂಗ. ದೇವರ ದಯೆಯಿಂದ ನಿನಗೆ ಮೂರೂ ಲಭಿಸಿದೆ. ಈಗ ಅದನ್ನು ಚೆನ್ನಾಗಿ ಉಪಯೋಗಿಸಿಕೊಂಡು ಮಾನವ ಜನ್ಮದ ಚರಮಗುರಿಯನ್ನು ಮುಟ್ಟು. ಶಾಶ್ವತ ಶಾಂತಿ ಮತ್ತು ಆನಂದ ವನ್ನು ಪಡೆಯಲು ಸಾಧ್ಯವಿರುವಾಗ ಕ್ಷಣಿಕ ಪ್ರಾಪಂಚಿಕ ಸುಖಭೋಗ ವನ್ನು ಅರಸಿಕೊಂಡು ಹೋದರೆ ಏನು ಪ್ರಯೋಜನ? ಎಲ್ಲವನ್ನೂ ತ್ಯಜಿಸಿ ಅವನ ಪಾದಕಮಲಗಳಲ್ಲಿ ಭಗವಂತನನ್ನು ಪಡೆಯಬೇಕೆಂದು ಶರಣಾ

ಗಿರುವೆ. ನಿನ್ನ ಜೀವನವನ್ನು ವ್ಯರ್ಥಮಾಡಿಕೊಳ್ಳಬೇಡ. ಮಗು, ಇದನ್ನು ನೆನಪಿನಲ್ಲಿಡು. ಪುನಃ ಮನುಷ್ಯನಂತೆ ಹುಟ್ಟಬಹುದು, ಆಧ್ಯಾತ್ಮಿಕ ಪಿಪಾಸೆಯೂ ಇರಬಹುದು; ಆದರೆ ನಿನ್ನ ಭಾಗಕ್ಕೆ ಈಗ ದೊರಕಿರುವ ಪರಮಹಂಸರ ಶಿಷ್ಯರ ಸಹವಾಸಭಾಗ್ಯ ಅಲಭ್ಯ. ಹಲವು ಜನ್ಮಗಳ ಪುಣ್ಯಪರಿಪಾಕದಿಂದ ಇಂತಹ ಭಾಗ್ಯ ಪ್ರಾಪ್ತವಾಗುವುದು. ವೃಥಾಪ್ರಾಪಂಚಿಕ ಸುಖಭೋಗಭಾಗ್ಯಗಳನ್ನು ಹುಡುಕುವ ಬದಲು ಕಾಲವನ್ನು ಯೋಗ್ಯವಾಗಿ ಉಪಯೋಗಿಸಿಕೊ.

ಶ್ರದ್ಧೆ, ನಿನ್ನ ಗುರು ನುಡಿಯಲ್ಲಿ ಅಚಲ ಶ್ರದ್ಧೆಮಾತ್ರ ಎಲ್ಲವನ್ನೂ ಸುಲಭಮಾಡುವುದು. ಇದಿಲ್ಲದೇ ಇದ್ದರೆ ಎಲ್ಲಾ ಧಾರ್ಮಿಕ ಆಚಾರ, ಉಪಚಾರದಿಂದ ಪ್ರಯೋಜನವಿಲ್ಲ. ಬೆಕ್ಕಿನ ಮರಿ ತನ್ನ ತಾಯಿಯನ್ನು ನೆಚ್ಚುವಂತೆ ಗುರುವಿನಲ್ಲಿ ಸಂಪೂರ್ಣ ಶರಣಾಗತನಾಗು. ಆಗ ಗುರು ನಿನ್ನ ಸರ್ವವನ್ನೂ ನೋಡಿಕೊಳ್ಳುವನು. ನಿನಗೆ ಬೇಕಾಗಿರುವುದು ಸರಳ ಶ್ರದ್ಧೆ ಮಾತ್ರ.

ಎಷ್ಟುದೂರ ನಿನ್ನ ಬುದ್ಧಿ ಹೋಗಬಲ್ಲುದು? ಯಾರು ನಿನ್ನ ಜವಾಬ್ದಾರಿಯನ್ನು ಹೊತ್ತಿರುವರೊ ಅವರಿಗೆ ತಮ್ಮ ಕರ್ತವ್ಯ ಗೊತ್ತಿದೆ. ನಿನಗಿಂತ ಹೆಚ್ಚು ಅವರು ನಿನ್ನ ಶ್ರೇಯಸ್ಸಿಗೆ ಕಾತುರರಾಗಿರುವರು. ಅವರು ಎಲ್ಲಾ ಕಷ್ಟ ಅಪಾಯಗಳಿಂದ ಪಾರುಮಾಡುವರು. ಗುರುರಕ್ಷಾಹಸ್ತದ ನೆರಳಿನಲ್ಲಿರುವ ಯಾವ ನಿಷ್ಠಾವಂತ ಶಿಷ್ಯನೂ ಅಪಾಯಕ್ಕೆ ಬೀಳುವುದಿಲ್ಲ.

ಎಲ್ಲಿಯವರೆವಿಗೂ ಮಾನವ ದೇವರನ್ನು ಕಂಡಿಲ್ಲವೊ ಅಲ್ಲಿಯವರೆವಿಗೂ ಮನುಷ್ಯ ತಪ್ಪುಮಾಡುವುದರಲ್ಲಿ ಸಂದೇಹವಿಲ್ಲ. ಗುರುವಿನಲ್ಲಿ ಶರಣಾದರೆ ತಪ್ಪುಮಾಡುವ ಸಂಭವ ಕಡಿಮೆಯಾಗುವುದು. ಗದ್ದೆಯ ಸಣ್ಣ ಅಂಚಿನಮೇಲೆ ತಂದೆಮಕ್ಕಳಿಬ್ಬರೂ ಹೋಗುತ್ತಿದ್ದ ಶ್ರೀರಾಮಕೃಷ್ಣರ ಉಪಮಾನವನ್ನು ಜ್ಞಾಪಿಸಿಕೊ. ತಂದೆ ಮಗುವಿನ ಕೈಯನ್ನು ಹಿಡಿದು ಹೋದರೆ ಮಗು ಜಾರಿಬೀಳುವ ಅಪಾಯವಿಲ್ಲ. ಆದರೆ ಮಗು ತಂದೆಯ ಕೈಯನ್ನು ಹಿಡಿದುಕೊಳ್ಳಲು ಯತ್ನಿಸಿದರೆ ಬೀಳುವ ಸಂಭವವಿದೆ. ಯೋಗ್ಯ ಗುರುವಿನ ಕೃಪೆ ದೊರೆತವರು ತಮ್ಮ ಕುಂದುಕೊರತೆಗಳನ್ನೆಲ್ಲ ನೇರಮಾಡುವ ಕೆಲಸವನ್ನು ಗುರುವಿನ ಪಾಲಿಗೆ ಬಿಟ್ಟು ನೆಮ್ಮದಿಯಗಿರಲಿ.

ಶಾಂತಿ ಆನಂದವನ್ನು ಪಡೆಯಬೇಕಾದರೆ ತ್ಯಾಗ ಅತಿಮುಖ್ಯ.

ಎಲ್ಲವನ್ನೂ ದೇವರಿಗಾಗಿ ತ್ಯಜಿಸಬೇಕು. ಭಗವಂತನನ್ನು ಪಡೆಯ ಬೇಕಾದರೆ ನೈಷ್ಠಿಕ ಬ್ರಹ್ಮಚರ್ಯ ಆವಶ್ಯಕ. ಬ್ರಹ್ಮಚರ್ಯವಿಲ್ಲದ ಮನುಷ್ಯ ಮೃಗಕ್ಕಿಂತ ಮೇಲಲ್ಲ. ವಿವೇಕವೇ ಮನುಷ್ಯನಿಗೂ, ಮೃಗಕ್ಕೂ ಇರುವ ವ್ಯತ್ಯಾಸ. ಮನುಷ್ಯ ಪ್ರಯತ್ನಪಟ್ಟರೆ ದೇವರನ್ನು ಪಡೆಯಬಲ್ಲ. ಆದರೆ ಮೂರ್ಖನಿಗೆ ಸಾಧ್ಯವಿಲ್ಲ. ಅವನು ಇಂದ್ರಿಯ ಗುಲಾಮನಾಗಿರುವನು.

ಈ ಜೀವನದಲ್ಲೇ ಶಾಂತಿ ಆನಂದವನ್ನು ಬಯಸಿ ಸಂತೋಷ ಮತ್ತು ತೃಪ್ತಿಯ ಸವಿನೋಡಬೇಕೆಂದು ಇಚ್ಛಿಸಿದರೆ ಸರ್ವವನ್ನೂ ತ್ಯಜಿಸಿ ದೇವರಲ್ಲಿ ಮಾತ್ರ ಶರಣಾಗು. ತ್ಯಾಗವೆಂದರೆ ದೇಹಕ್ಕೆ ಭಸ್ಮ ಬಳಿದು ಕೊಂಡು ದಂಡಹಿಡಿದುಕೊಂಡು ಸಂಚಾರಮಾಡುವುದೆಂದು ತಿಳಿಯಬೇಡ. ಕೇವಲ ತೋರಿಕೆಗಾಗಿರುವ ಬಾಹ್ಯಚಿಹ್ನೆಯಿಂದ ಏನೂ ಪ್ರಯೋಜನವಿಲ್ಲ. ಅದರಿಂದ ಕೆಡಕು ಜಾಸ್ತಿ. ನಿಜವಾದ ತ್ಯಾಗವೆಂದರೆ ಆತ್ಮಾರ್ಪಣೆ, ಆತ್ಮಾರ್ಪಣೆಮಾಡಿ ದೇವರಲ್ಲಿ ಶರಣಾಗುವುದು. "ಹೇ ದೇವ! ನನ್ನ ದೇಹ, ಮನಸ್ಸು ಎಲ್ಲವೂ ನಿನ್ನದು. ನಿನ್ನ ಇಚ್ಛೆ ಬಂದಂತೆ ಉಪಯೋಗಿಸ ಬಹುದೆಂದು" ಪ್ರಾರ್ಥಿಸು. ಜಗನ಼್ಾಯಿಗಲ್ಲದೆ ತಮಗೇನೂ ತಿಳಿಯದು. ಅವರು ಏನುಮಾಡಿದರೂ ಎಲ್ಲಾ ಆಕೆಯ ಇಚ್ಛೆ ಮತ್ತು ನೇತೃತ್ವದಂತೆ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದುದು ನಿನಗೆ ಗೊತ್ತಿಲ್ಲವೆ? "ಹೇ ದೇವ! ನನಗೆ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ತಿಳಿಯದು. ನಾನು ನಿನ್ನ ಸೇವಕ. ನಿನ್ನ ಇಚ್ಛೆಯಂತಾಗಲಿ" ಎಂದು ಪ್ರಾರ್ಥಿಸಿ.

ಇಂತಹ ಸ್ವಭಾವ ನಿನ್ನದಾಗುವವರೆಗೂ ನತತ ಹೋರಾಡು ನೀನು ದೇವರಲ್ಲಿ ಸಂಪೂರ್ಣ ಶರಣಾಗತನಾದರ ದೇವರು ನಿನ್ನ ಮೂಲಕ ಆವಶ್ಯಕವಾದುದನ್ನೆಲ್ಲಾ ಮಾಡುವನು. ಸತತ ಅವನನ್ನು ಪ್ರಾರ್ಥಿಸು. ಅವನ ಪಾದದಡಿಯಲ್ಲಿ ಶರಣುಹೊಂದು. ನಿನ್ನ ಮನಸ್ಸಿನಮೇಲೆ ಮತ್ತೊಂದನ್ನು ಒತ್ತಿಹೇಳಬೇಕೆಂದಿರುವೆ. ಜನರು ನಿನ್ನನ್ನು ಹೊಗಳಲಿ, ತೆಗಳಲಿ, ಆದರಿಸಲಿ, ತಿರಸ್ಕರಿಸಲಿ, ಜಗತ್ತಿನಲ್ಲಿ ನಿನಗೆ ಒಂದು ಸ್ಥಳ ವಿರಲಿ, ಇಲ್ಲದೇ ಇರಲಿ, ನಿನ್ನದೇಹವಿರಲಿ, ಬೀಳಲಿ, ಒಂದುಸಲ ಜೀವನದ ಗುರಿ ಭಗವತ್ಸಾಕ್ಷಾತ್ಕಾರವೆಂದು ತಿಳಿದಮೇಲೆ ಈ ಆದರ್ಶದಿಂದ ಸ್ವಲ್ಪವೂ ಸರಿಯಬೇಡ. ಸ್ಥಿರಸಂಕಲ್ಪದಿಂದ ನಿನ್ನ ಮನಸ್ಸಿಗೆ ದೇವರನ್ನು "ಈಗಲೇ,

ಇಲ್ಲೇ ಏನಾದರಾಗಲಿ, ಸಾಕ್ಷಾತ್ಕಾರಮಾಡಿಕೊಳ್ಳಲೇಬೇಕು" ಎಂದು ಹೇಳು.

ಇಂತಹ ಏರಕದಲ್ಲಿ ನಿನ್ನ ಜೀವನವನ್ನು ರೂಪಿಸಿದಾಗಮಾತ್ರ ಶ್ರೀರಾಮಕೃಷ್ಣರ ಯೋಗ್ಯ ಸಂತಾನವಾಗುವೆ. ನಿನ್ನ ಸತ್ಸಂಗ ಫಲಕಾರಿಯಾಗುವುದು. ನೀನು ಧನ್ಯನಾಗುವೆ ಇಲ್ಲದೇ ಇದ್ದರೆ ನಿನ್ನ ಜೀವನ ವ್ಯರ್ಥವಾಗುವುದು. ನಿನಗೂ ಮುತ್ಕಾಳನಿಗೂ ಏನೂ ವ್ಯತ್ಯಾಸವೇ ಇರುವುದಿಲ್ಲ. ಶ್ರೀರಾಮಕೃಷ್ಣರ ಯೋಗ್ಯಸಂತಾನರೆಂದು ನಿನ್ನನ್ನು ಕರೆಯುವುದಕ್ಕೆ ಆಗುವುದಿಲ್ಲ.

ನೀನು ಯಾವಾಗಲೂ ಗಮನಿಸಬೇಕಾದ ಮತ್ತೊಂದು ಅಂಶವೇ ಇದು. ಸಾಧಾರಣ ಮನುಷ್ಯರು ಗುರು ಎಂದರೆ ಮಂತ್ರವನ್ನು ಕಿವಿಯಲ್ಲಿ ಹೇಳುವರು ಎಂದು ತಿಳಿದುಕೊಂಡಿರುವರು. ಅವನಲ್ಲಿ ಗುರು ಯೋಗ್ಯತೆ ಇದೆಯೆ ಇಲ್ಲದೆ ಇದಾವುದನ್ನೂ ನೋಡುವುದೇ ಇಲ್ಲ. ಈಗ ಅಂತಹ ಭಾವನೆ ಮಾಯವಾಗುತ್ತಿದೆ. ಸಾಕ್ಷಾತ್ಕಾರ ಪಡೆದಿಲ್ಲದವರು ಎಂದಿಗೂ ಗುರುವಾಗಲಾರರು ಎಂದು ಈಗ ಗೊತ್ತಾಗಿದೆ. ಯಾರಿಗೆ ದಾರಿ ಗೊತ್ತಿಲ್ಲವೋ ಅವರು ಮತ್ತೊಬ್ಬರಿಗೆ ಹೇಗೆ ತೋರಿಸಬಲ್ಲರು? ಮಂತ್ರ ಹಿಂದಿನಷ್ಟೇ ಜಾಗ್ರತವಾಗಿರುವುದು. ಆದರೆ ಯಾರು ಇದರೊಂದಿಗೆ ವ್ಯವಹರಿಸುವರೊ ಅವರಿಗೆ ಇದರ ನಿಯಮ ಗೊತ್ತಿಲ್ಲ. ಇದರಿಂದ ಅವರೇ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಲಾರರು. ಅವರ ಶಿಷ್ಯರು ಇದಕ್ಕೂ ಕಡಿಮೆ. ಅಂತಹವರಿಗೆ ಹೇಗೆ ನಿಜವಾದ ಶಾಂತಿ, ಆನಂದ ದೊರಕಬೇಕು?

ಶ್ರೀರಾಮಕೃಷ್ಣರು ಸ್ಥಿತಿಯನ್ನು ಬದಲಾಯಿಸಿರುವರು. ಅವರ ಶಿಷ್ಯರಲ್ಲಿ ಅನರ್ಘ್ಯ, ಆಧ್ಯಾತ್ಮಿಕ ರತ್ನಗಳು ದೊರಕುತ್ತವೆ. ಅವರ ಆಶೀರ್ವಾದವನ್ನು ಪಡೆದವರು ಧನ್ಯರು. ಆ ಮಹಾಪುರುಷನ ಮಕ್ಕಳು ಹೇಳಿದಂತೆ ಭಕ್ತಿ ಶ್ರದ್ಧೆಯಿಂದ ನಡೆದುಕೊಂಡರೆ ಮಾನವ ಗುರಿಯಾದ ಪರಮಾನಂದವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಈ ಕಾಲಕ್ಕೆ ಯೋಗ್ಯವಾದ ಆಧ್ಯಾತ್ಮಿಕ ಸಾಧನೆ ಅವರ ಮಕ್ಕಳಿಗೆ ಗೊತ್ತು. ಪ್ರತಿಯೊಬ್ಬರ ಆತ್ಮವಿಕಾಸಕ್ಕೆ ತಕ್ಕಂತೆ ಅವರು ಸಲಹೆ ಕೊಡುವರು. ಅದೃಷ್ಟವಶದಿಂದ ನೀನು ಯಾವ ಮಾರ್ಗದಲ್ಲಿರುವೆಯೊ ಅಲ್ಲಿಂದ ಮುಂದುವರಿ.

ಮಗುವಿನಂತೆ ಸರಳ ಶ್ರದ್ಧೆಯಿಂದ ಗುರುವಿಗೆ ಪ್ರಾರ್ಥಿಸು. ಉಳಿದು ದನ್ನೆಲ್ಲಾ ಅವರು ಮಾಡುವರು. ದೇಹವಿರಲಿ, ಇಲ್ಲದೇ ಇರಲಿ, ಯಾರು ತಮ್ಮ ಶಿಷ್ಯರು ಉದ್ಧಾರವಾಗಬೇಕೆಂದು ಯತ್ನಿಸುವರೋ ಅವರೇ ನಿಜ ವಾದ ಗುರು. ಈ ಕಾಲದ ಒಂದು ಮಹಾತ್ಮೆ ಏನೆಂದರೆ ದೇಹ ಮಾಯ ವಾದ ಮೇಲೂ ಶಿಷ್ಯರಿಗೆ ಗುರು ಗೋಚರಿಸಿ ಅವರಿಗೆ ದಾರಿ ತೋರಿ, ಆಶೀರ್ವದಿಸುವನು.

ಬಿಡುವಿಲ್ಲದೆ ಹೋರಾಡು. ಅನುಮಾನವನ್ನೆಲ್ಲ ಬಿಟ್ಟು ಸಾಧನವಲ್ಲಿ ತನ್ಮಯನಾಗು. ಗುರುವಿನಿಂದ ಏನನ್ನು ಕಲಿತಿರುವೆಯೋ ಅದನ್ನು ಅನುಸರಿಸು. ನೀನು ಏನುಮಾಡುತ್ತಿರುವಿ ಎಂಬುದು ಅಕ್ಕಪಕ್ಕದವರಿಗೂ ತಿಳಿಯದೇ ಇರಲಿ. ಕೆಲವರು ನಿನ್ನನ್ನು ಹಾಸ್ಯಮಾಡಬಹುದು. ನಿನ್ನ ಶ್ರದ್ಧೆಗೆ ಭಂಗತರಬಹುದು. ಮತ್ತೆ ಕೆಲವರು ನಿನ್ನನ್ನು ಹೊಗಳಿ, ನಿನಗೆ ಗೌರವ ತೋರಿ, ನಿನ್ನ ಅಹಂಕಾರವನ್ನು ಹೆಚ್ಚಿಸಬಹುದು. ಯಾವಾಗಲೂ ಶ್ರೀರಾಮಕೃಷ್ಣರ ಮುಖ್ಯವಾದ ಈ ಉಪದೇಶವನ್ನು ನಿನಪಿನಲ್ಲಿಡು. ನಿನ್ನ ಮನಸ್ಸಿನ ಅಂತರಾಳದಲ್ಲಿ, ಕಾಡಿನಲ್ಲಿ, ನಿರ್ಜನ ಮೂಲೆಯಲ್ಲಿ, ಧ್ಯಾನ ಮಾಡು. ಇದರ ಅರ್ಥವೇನೆಂದರೆ ಸಾಧನೆಯನ್ನು ರಹಸ್ಯವಾಗಿ ಮಾಡ ಬೇಕು. ಮತ್ತೊಬ್ಬರಿಗೆ ಇದು ತಿಳಿಯಕೂಡದು. ಇದನ್ನು ಬಿಡದೆ ಕೆಲವು ದಿನಗಳಾದರೂ ನೀನು ಅಭ್ಯಾಸಮಾಡಿದರೆ ನಿನಗೆ ಎಷ್ಟೋ ಸಂತೋಷ, ಆನಂದ ಬರುವುದು. ನೀನು ಸಂಪೂರ್ಣ ಬೇರೆ ಮನುಷ್ಯ ನಾಗುವೆ. ಯಾರು ಅವರ ಹೆಸರಿನಲ್ಲಿ ತ್ಯಜಿಸಿರುವರೊ ಅವರು ದೃಢವಾಗಿ ಈ ಜನ್ಮದಲ್ಲೇ ಅವರನ್ನು ನೋಡಬೇಕೆಂದು ಸಂಕಲ್ಪಮಾಡಲಿ. ಇದು ನಿಮ್ಮ ಜೀವನದ ಚರಮಧ್ಯೇಯವಾಗಿರಲಿ. ನಿಜವಾದ ಗುರುವಿನ ಆಶೀರ್ವಾದ ನಿನಗೆ ದೊರೆತಿದೆ. ನೀನು ಜಯಶೀಲನಾಗುವುದರಲ್ಲಿ ಸಂದೇಹ ವಿಲ್ಲ. ಮಗು, ಈ ವಿಷಯದಲ್ಲಿ ಸ್ವಲ್ಪವೂ ಸಂದೇಹಬೇಡ.

**೩೫**

## ಪತ್ರದ ಕೆಲವು ಅಂಶಗಳು

ಯಾವಾಗಲೂ ನಿನ್ನ ಮನಸ್ಸನ್ನು ದೇವರ ಚಿಂತನೆಯಲ್ಲಿಡು. ಆಗ ಮನಸ್ಸಿನ ಮಲಿನತೆಯೆಲ್ಲಾ ತೊಲಗುವುದು. ನಿತ್ಯಪೂಜೆಗೆ ಒಂದು ಕೋಣೆಮಾಡು. ಪ್ರತಿತಿನ ಬೆಳಿಗ್ಗೆ ಸಾಯಂಕಾಲ ಅಲ್ಲಿಗೆ ಹೋಗಿ

ಆಸನದಮೇಲೆ ಕುಳಿತು ಜಪ, ಧ್ಯಾನ, ಪ್ರಾರ್ಥನೆಯನ್ನು ಕ್ರಮವಾಗಿ ಎಷ್ಟು ಹೊತ್ತು ಸಾಧ್ಯವೋ ಅಷ್ಟುಹೊತ್ತುಮಾಡು. ಪ್ರಪಂಚದಲ್ಲಿ ಮನುಷ್ಯನಾಗಿ ಹುಟ್ಟಿದಮೇಲೆ ಹೆಚ್ಚು ದೇವರ ಚಿಂತನೆಯಲ್ಲಿ ಕಾಲ ಕಳೆದಷ್ಟೂ ಪ್ರಯೋಜನ ಹೆಚ್ಚು. ಪ್ರಾಪಂಚಿಕ ವಿಷಯಗಳಮೇಲೆ ಹೆಚ್ಚು ಆಸಕ್ತನಾದಷ್ಟೂ ಮನಸ್ಸಿಗೆ ಅಶಾಂತಿ ಹೆಚ್ಚು. ಕೃಪಾಸಿಂಧು ಭಗವಂತ, ದಯೆತೋರಿ ನಿನ್ನನ್ನು ಸರಿಯಾದ ಮಾರ್ಗದಲ್ಲಿ ನಡೆಸಲಿ ಎಂಬುದೇ ನನ್ನ ಪ್ರಾರ್ಥನೆ.

ಇದನ್ನು ತಿಳಿ. ದೇವರ ಪೂಜೆ ಇಲ್ಲದೆ ಶಾಂತಿ ಇಲ್ಲ. ಎಲ್ಲಾ ಕೆಲಸವನ್ನೂ ಬಿಟ್ಟು ಪ್ರತಿದಿನವೂ ಸ್ವಲ್ಪಹೊತ್ತು ಜಪ, ಧ್ಯಾನ, ಪ್ರಾರ್ಥನೆ, ಭಜನೆಯಲ್ಲಿ ಕಳೆ. ನಿಜವಾದ ಭಕ್ತಿ, ಶ್ರದ್ಧೆ, ಜ್ಞಾನ, ಬಹುಕಾಲ ಸಾಧನೆಯ ಪರಿಣಾಮ. ಎಲ್ಲೋ ಸ್ವಲ್ಪ ಅರೆಮನಸ್ಸಿನಿಂದ ಸಾಧನೆಮಾಡಿ ದೇವರ ಸಾಕ್ಷಾತ್ಕಾರ ಅಥವಾ ಪರಮಾನಂದ ಪ್ರಾಪ್ತವಾಗದೇ ಇದ್ದರೆ ಸಂಶಯಪಡುವರು. ಇವಕ್ಕೆ ಕಾರಣ ಗೊತ್ತೇ ಇದೆ. ಇವರಿಗೆ ದೇವರಮೇಲೆ ನಿಜವಾದ ಆಸಕ್ತಿ ಇಲ್ಲ. ಸಾಧನದ ಮಾರ್ಗದಲ್ಲಿ ಬಿಡದೆ ನಡೆಯಲು ಆಗುವುದಿಲ್ಲ. ಇದು ಬಹಳ ಕಷ್ಟವಾಗಿ ಕಾಣುವುದು.

ಭಗವಂತನಮೇಲೆ ಆಸಕ್ತಿ, ಮತ್ತು ಪ್ರೇಮವಿಲ್ಲದೇಇದ್ದರೆ ಮನಸ್ಸು ನೀರಸವಾಗಿ ಅಶಾಂತವಾಗುವುದು. ದೇವರಿಗೆ ನೀನು ಎಷ್ಟು ತೊಂದರೆ ಪಟ್ಟರೆ ಅಷ್ಟು ಕೊನೆಗೆ ಶಾಂತನಾಗುವೆ. ನನ್ನ ಸ್ನೇಹಿತನೆ, ಸಂತೋಷದಿಂದ ಪ್ರಯತ್ನಪಡು. ಕೊನೆಗೆ ಎಲ್ಲಾ ಆತಂಕಗಳಿಂದಲೂ ಪಾರಾಗುವೆ ಎನ್ನುತ್ತಿದ್ದರು ಶ್ರೀರಾಮಕೃಷ್ಣರು. ಸಾಧನೆಯಲ್ಲಿ ತನ್ಮಯನಾಗು ಬಿಡಬೇಡ. ನಿನ್ನ ಪ್ರಾಣಕ್ಕೆ ಅಪಾಯ ಬಂದರೂ ಅಂಜಬೇಡ.

* * * * *

ನಿನ್ನ ಸಾಧನೆಯನ್ನು ಶ್ರದ್ಧೆಯಿಂದ ಕ್ರಮವಾಗಿ ಮುಂದುವರಿಸುತ್ತಿರುವಿ ಎಂದು ಕೇಳಿ ಸಂತೋಷವಾಯಿತು. ಹೀಗೆಯೇ ಕೆಲವು ವರ್ಷ ಮುಂದುವರಿದರೆ ನಿನ್ನ ಪ್ರಯತ್ನ ನಿಷ್ಫಲವಾಗುವುದಿಲ್ಲ. ನಿನ್ನ ದೇಹ ಅಷ್ಟು ದೃಢವಾಗಿಲ್ಲದೇ ಇರುವುದರಿಂದ ಅಷ್ಟುಹೊತ್ತು ಅಭ್ಯಾಸಮಾಡಬೇಡ. ಕ್ರಮೇಣ ನಿಧಾನವಾಗಿ ಮುಂದುವರಿ.

* * * * *

ಬರುವ ಜೂನ್ ತಿಂಗಳ ಆದಿಯಲ್ಲಿ ಇಲ್ಲಿಂದ ಹೊರಟು ಮೂರುನಾಲ್ಕು

ತಿಂಗಳು ಕಾಶಿ ಮುಂತಾದ ಪವಿತ್ರಸ್ಥಳಗಳನ್ನು ನೋಡಿಕೊಂಡು ಸಾಧನೆಯಲ್ಲಿ ಕಳೆಯಬೇಕೆಂದಿರುವೆನು. ಇದು ಫಲಕಾರಿಯಾಗಬೇಕಾದರೆ ದೇವರ ಕೈಯಲ್ಲಿದೆ.

ವೈರಾಗ್ಯದ ಬೆಂಕಿ ಇಲ್ಲದೇಇದ್ದರೆ ಮಾನವಹೃದಯಲ್ಲಿ ಭಗವದಾಲೋಚನೆ ಇರಲಾರದು. ಎಷ್ಟು ಹೆಚ್ಚು ವೈರಾಗ್ಯವಿದ್ದರೆ ಅಷ್ಟು ಸಂತೋಷಚಿತ್ತನಾಗುವನು ಎಂಬುದು ದೃಢಮತ. ವಿವೇಕ ವೈರಾಗ್ಯವೇ ಮೂರ್ತಿವೆತ್ತಂತೆ ಇದ್ದರು ಶ್ರೀರಾಮಕೃಷ್ಣರು. ಕಾಲಕಳೆದಂತೆ ಮಾತ್ರ ಅವರನ್ನು ಚೆನ್ನಾಗಿ ತಿಳಿದುಕೊಳ್ಳುತ್ತಿರುವೆವು. ಶಾಸ್ತ್ರದಲ್ಲಿ ವಿವೇಕ ವೈರಾಗ್ಯವನ್ನು ಓದಿದ್ದೆವು. ಪರಮಹಂಸರಲ್ಲಿ ಅದು ಮೂರ್ತಿವೆತ್ತುದನ್ನು ಕಂಡೆವು. ವಿವೇಕ ವೈರಾಗ್ಯದ ಆವಿರ್ಭೂತದಂತಿದ್ದ ಶ್ರೀರಾಮಕೃಷ್ಣರಂತಹವರ ಸಮೀಪದಲ್ಲಿದ್ದೂ ಅದನ್ನು ನಮ್ಮದನ್ನಾಗಿ ಮಾಡಿಕೊಳ್ಳಲಿಲ್ಲ. ಇದೊಂದು ಶೋಚನೀಯ ಸಂಗತಿ

---

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು, ಮೈಸೂರು

| | | | |
|---|---|---|---|
| ಶ್ರೀ ರಾಮಕೃಷ್ಣ ಉಪದೇಶಾಮೃತ .... .... | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) .... .... | ೩ | ೮ | ೦ |
| ಪತ್ರಮಾಲೆ .... .... .... .... | ೩ | ೦ | ೦ |
| ಶ್ರೀ ಶಾರದಾ ದೇವಿ .... .... .... | ೨ | ೦ | ೦ |
| ಶ್ರೀ ರಾಮಕೃಷ್ಣ .... .... .... | ೧ | ೮ | ೦ |
| ರಾಜಯೋಗ .... .... .... .... | ೨ | ೧೦ | ೦ |
| ಕರ್ಮಯೋಗ .... .... .... .... | ೧ | ೮ | ೦ |
| ಭಕ್ತಿಯೋಗ .... .... .... .... | ೧ | ೦ | ೦ |
| ತ್ರಿವೇಣೀ (ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ ಶಾರದಾದೇವಿ ಸಂಕ್ಷಿಪ್ತ ಜೀವನ) .... .... | ೧ | ೦ | ೦ |
| ಶ್ರೀ ಗುರುದೇವರ ವಚನ .... .... .... | ೧ | ೦ | ೦ |
| ಬ್ರಹ್ಮಾನಂದ ವಚನ ಸುಧೆ .... .... .... | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ .... .... | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ .... .... | ೧ | ೪ | ೦ |
| ಪರಿವ್ರಾಜಕ .... .... .... .... | ೧ | ೪ | ೦ |
| ವಿದ್ಯಾಭ್ಯಾಸ .... .... .... .... | ೦ | ೧೦ | ೦ |
| ಹಿಂದೂ ಧರ್ಮಸಾರ .... .... .... | ೦ | ೧೦ | ೦ |
| ವರ್ತಮಾನ ಭಾರತ .... .... .... | ೦ | ೧೦ | ೦ |
| ವಿವೇಕವಾಣಿ .... .... .... .... | ೦ | ೧೦ | ೦ |
| ನನ್ನ ಗುರುದೇವ .... .... .... | ೦ | ೮ | ೦ |
| ಚಿಕಾಗೋ ಉಪನ್ಯಾಸ .... .... .... | ೦ | ೬ | ೦ |
| ಆರತಿ .... .... .... .... | ೦ | ೪ | ೦ |